

ಹಂಪಿ ಕನ್ನಡ ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಿದ

ಎಂ.ಫಿಲ್.ಪದವಿಯ ಸಂಪ್ರಬಂಧ

ಅಧ್ಯಯನದ ವಿಷಯ

# "ಕುಮಾರವ್ಯಾಸನ ಉದ್ಯೋಗಪರ್ವದ ಗ್ರಂಥ ಸಂಪಾದನೆಗಳ ಸಮೀಕ್ಷೆ"

ಸಂಶೋಧನಾ ವಿದ್ಯಾರ್ಥಿ

ಗೀತಾ. ಆರ್

ಮಾರ್ಗದರ್ಶಕರು

ಕೆ.ಎಸ್. ಮಧುಸೂದನ



ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನಾ ಕೇಂದ್ರ

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ, ಬೆಂಗಳೂರು




ಹಂಪಿ ಕನ್ನಡ ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಿದ
ಎಂ.ಫಿಲ್.ಪದವಿಯ ಸಂಪ್ರಬಂಧ

ಅಧ್ಯಯನದ ವಿಷಯ

# "ಕುಮಾರವ್ಯಾಸನ ಉದ್ಯೋಗಪರ್ವದ ಗ್ರಂಥ ಸಂಪಾದನೆಗಳ ಸಮೀಕ್ಷೆ"

ಸಂಶೋಧನಾ ವಿದ್ಯಾರ್ಥಿ

**ಗೀತಾ. ಆರ್**




ಮಾರ್ಗದರ್ಶಕರು

**ಕೆ.ಎಸ್. ಮಧುಸೂದನ**



ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನಾ ಕೇಂದ್ರ

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ, ಬೆಂಗಳೂರು

2007-2008

# ಮಾರ್ಗದರ್ಶಕರ ಪ್ರಮಾಣಪತ್ರ

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ, ಬೆಂಗಳೂರಿನ ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನಾ ಕೇಂದ್ರದ ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ೨೦೦೭-೨೦೦೮ನೇ ಸಾಲಿನ ಎಂ.ಫಿಲ್. ಪದವಿಗಾಗಿ ''ಕುಮಾರವ್ಯಾಸನ ಉದ್ಯೋಗ ಪರ್ವದ ಗ್ರಂಥಸಂಪಾದನೆಗಳ ಸಮೀಕ್ಷೆ'' ಎಂಬ ಸಂಪ್ರಬಂಧವನ್ನು ಗೀತಾ. ಆರ್ ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ.

ಈ ಸಂಪ್ರಬಂಧ ವಿದ್ಯಾರ್ಥಿಯ ಸ್ವಂತ ಬರವಣಿಗೆಯಾಗಿದ್ದು ಇದರ ಯಾವುದೇ ಭಾಗವನ್ನು ಬೇರೆಲ್ಲೂ ಪ್ರಕಟಿಸಿಲ್ಲ ಮತ್ತು ಬೇರೆ ಯಾವುದೇ ಪದವಿಗಾಗಿ ಸಲ್ಲಿಸಿಲ್ಲ ಎಂದು ಈ ಮೂಲಕ ಧೃಢೀಕರಿಸುತ್ತೇನೆ.

ದಿನಾಂಕ : ೬:೧೧:೨೦೦೮

ಸ್ಥಳ : ಬೆಂಗಳೂರು

ಸಹಿ

(ಕೆ.ಎಸ್.ಮಧುಸೂದನ)

# ಅಭ್ಯರ್ಥಿಯ ಪ್ರಮಾಣ ಪತ್ರ

ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನ, ಬೆಂಗಳೂರಿನ ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನಾ ಕೇಂದ್ರದ ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ೨೦೦೭-೨೦೦೮ನೇ ಸಾಲಿನ ಎಂ.ಫಿಲ್.ಪದವಿಗಾಗಿ ''ಕುಮಾರವ್ಯಾಸನ ಉದ್ಯೋಗ ಪರ್ವದ ಗ್ರಂಥಸಂಪಾದನೆಗಳ ಸಮೀಕ್ಷೆ'' ಎಂಬ ಸಂಪ್ರಬಂಧವನ್ನು ಕೆ.ಎಸ್.ಮಧುಸೂದನ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸುತ್ತಿದ್ದೇನೆ.

ಈ ಸಂಪ್ರಬಂಧ ನನ್ನ ಸ್ವಂತ ಬರವಣಿಗೆಯಾಗಿದ್ದು ಇದರ ಯಾವುದೇ ಭಾಗವನ್ನು ಈವರೆಗೂ ಬೇರೆಲ್ಲೂ ಪ್ರಕಟಪಡಿಸಿಲ್ಲ ಮತ್ತು ಬೇರೆ ಯಾವುದೇ ಪದವಿಗಾಗಿ ಸಲ್ಲಿಸಿಲ್ಲ ಎಂದು ಈ ಮೂಲಕ ಧೃಢೀಕರಿಸುತ್ತೇನೆ.

ದಿನಾಂಕ : ೬:೧೧:೨೦೦೮ ಸಹಿ

ಸ್ಥಳ : ಬೆಂಗಳೂರು.

Geetha.R

(ಗೀತಾ.ಆರ್)

# ಪರಿವಿಡಿ

## ಅಧ್ಯಾಯಗಳು

# ಅಧ್ಯಯನದ ಉದ್ದೇಶ ಸ್ವರೂಪ ಮತ್ತು ವ್ಯಾಪ್ತಿ

ಕನ್ನಡ ಸಾಹಿತ್ಯದಲ್ಲಿ ಪಂಪನ ನಂತರದ ಶ್ರೇಷ್ಠಕವಿ ಎಂದರೆ ಕುಮಾರವ್ಯಾಸ. ಮಹಾಭಾರತವನ್ನು ಕಥಾವಸ್ತುವನ್ನಾಗಿರಿಸಿಕೊಂಡ ಪಂಪನ ಕಾವ್ಯ ಚಂಪುವಾದರೆ, ಕುಮಾರವ್ಯಾಸನ ಕಾವ್ಯ ಭಾಮಿನಿಷಟ್ಪದಿ. ಇಬ್ಬರ ಶೈಲಿ ಬೇರೆ-ಬೇರೆಯಾದರೂ, ಕಥಾವಸ್ತು ಮಾತ್ರ ಒಂದೇ. ಪಂಪನಿಗಿಂತ ಭಿನ್ನವಾದ ಕಾವ್ಯ, ಶೈಲಿ, ಜನಪ್ರಿಯತೆಗಳಿಂದ ಶ್ರೇಷ್ಠನಾದವನು ಕುಮಾರವ್ಯಾಸ. ಮೂರು, ನಾಲ್ಕು ಮಾತ್ರೆ ಗಣದ ಭಾಮಿನಿಷಟ್ಪದಿ ಕೇಳುವುದಕ್ಕೆ ಇಂಪು, ಹಾಡುವುದಕ್ಕೆ ಸುಲಭ, ಗಮಕಿಗಳಿಗೆ ಅತಿಪ್ರಿಯ, ದೇಸಿಶೈಲಿ ಅಲಂಕಾರಗಳು ಮುಂತಾದವುಗಳಿಂದ ರೂಪಕಸಾಮ್ರಾಜ್ಯ ಚಕ್ರವರ್ತಿ ಎಂದೇ ಪ್ರಸಿದ್ಧಿಯಾಗಿರುವ ಕುಮಾರವ್ಯಾಸ ವ್ಯಾಸನ ಹದಿನೆಂಟು ಪರ್ವದ ಮಹಾಭಾರತದಲ್ಲಿ ಹತ್ತು ಪರ್ವಗಳನ್ನು ಮಾತ್ರ ಬರೆದು ಉಳಿದ ಎಂಟು ಪರ್ವಗಳನ್ನು ಕೈಬಿಟ್ಟಿರುವ ಉದ್ದೇಶವೆಂದರೆ ದುರ್ಯೋಧನನ ಮರಣದ ನಂತರ ಮಹಾಭಾರತ ಓದುಗನ ಆಸಕ್ತಿ, ಅಭಿರುಚಿ, ಉತ್ಸಾಹವನ್ನು ಇಮ್ಮಡಿಗೊಳಿಸದೇ ಇರಬಹುದು ಎಂಬುದೇ ಆಗಿದೆ.

**'ಭಾರತೇಸಾರಂ ಉದ್ಯೋಗಃ'** ಮಹಾಭಾರತದ ಸಾರವೇ ಉದ್ಯೋಗಪರ್ವ. ಮಹಾಭಾರತದ ಕೇಂದ್ರಬಿಂದು ಶ್ರೀಕೃಷ್ಣ. ದೈವಸಂಭೂತನಾದ ಕೃಷ್ಣನ ಎಲ್ಲಾ ಅಂಶಗಳೂ ಈ ಉದ್ಯೋಗಪರ್ವದಲ್ಲಿ ವ್ಯಕ್ತವಾಗುತ್ತದೆ. ಮುಂದಿನ ಯುದ್ಧಪಂಚಕಗಳಿಗೆ ಉದ್ಯೋಗಪರ್ವವೇ ನಾಂದಿ ಇಂತಹ ಉದ್ಯೋಗಪರ್ವವನ್ನು ಕೇಂದ್ರವಾಗಿಟ್ಟುಕೊಂಡು ವಿಶ್ಲೇಷಣೆ ಮಾಡಿರುವ ಬರಹಗಳು ಕನ್ನಡದಲ್ಲಿ ಇದುವರೆಗೆ ಬೆರಳೆಣಿಕೆಯಷ್ಟು ಮಾತ್ರ. ಉಳಿದ ಎಲ್ಲಾ ಪರ್ವಗಳಿಗಿಂತ ಶ್ರೇಷ್ಠ ಪರ್ವವಾಗಿರುವ ಉದ್ಯೋಗಪರ್ವವನ್ನು ನನ್ನ ಅಧ್ಯಯನದ ವಸ್ತುವಿಷಯವನ್ನಾಗಿ ಈ ಕಾರಣಗಳಿಂದ ಆಯ್ಕೆ ಮಾಡಿಕೊಂಡಿರುತ್ತೇನೆ.

ಕುಮಾರವ್ಯಾಸ ಭಾರತದ ಉದ್ಯೋಗಪರ್ವದ ಸಂಪಾದನಾ ಕಾರ್ಯವನ್ನು ಕನ್ನಡದಲ್ಲಿ ವಿವಿಧ ವಿದ್ವಾಂಸರು ಕ್ರಿ.ಶ. ೧೮೬೫ರಿಂದ ಇಲ್ಲಿಯವರೆಗೆ ಮಾಡಿದ್ದಾರೆ. ಉದ್ಯೋಗಪರ್ವದ ಸಂಪಾದನೆ, ಪ್ರಕಟಣೆ, ವಿವಿಧ ಸಂಪಾದಕರು ಬರೆದಿರುವ ಮುನ್ನುಡಿಗಳು, ವ್ಯಾಖ್ಯಾನಗಳು, ನೀಡಿರುವ ಪಾಠಾಂತರಗಳು ಆಯಾ ಸಂಪಾದಕರು ಪಠ್ಯದ ಅಂತ್ಯದಲ್ಲಿ ನೀಡಿರುವ ನಿಘಂಟು, ಶಬ್ದಕೋಶ ಮುಂತಾದವುಗಳಲ್ಲಿ ಸಮೀಕ್ಷಿಸಲು 'ಎಸ್.ಎನ್. ಕೃಷ್ಣಜೋಯಿಸ್' ಅವರ **''ಉದ್ಯೋಗಪರ್ವ''** ಮತ್ತು 'ಎಂ.ವಿ. ಸೀತಾರಾಮಯ್ಯ'ನವರ **''ಕುಮಾರವ್ಯಾಸ ಭಾರತ ಸಂಗ್ರಹ''**ಗಳೆರಡನ್ನು ಮಾತ್ರ ಆಯ್ಕೆ ಮಾಡಿಕೊಳ್ಳಲಾಗಿದೆ. ಉದ್ಯೋಗಪರ್ವದ ಬಗ್ಗೆ ಬಹಳಷ್ಟು ಕೃತಿಗಳು ಬಂದಿದ್ದರೂ ಇವರ ಕೃತಿಗಳಲ್ಲಿ ಪಾಠಾಂತರ, ಸ್ವೀಕೃತಪಾಠ ಮುಂತಾದ ವಿಷಯವನ್ನು ಗಮನಿಸಿರುವುದರಿಂದ ಇವರ ಆವೃತ್ತಿಗಳನ್ನು ಅಧ್ಯಯನದ ವ್ಯಾಪ್ತಿಯೊಳಗೆ ತರಲಾಗಿದೆ. ಇವರಿಬ್ಬರು ಶಾಸ್ತ್ರೀಯವಾಗಿ ಮಾಡಿರುವ ಸಂಪಾದನಾ ಕಾರ್ಯವನ್ನು ತೌಲನಿಕವಾಗಿ ಗಮನಿಸಲಾಗಿದೆ.

# ಅಧ್ಯಾಯ - ೧

# ಪ್ರಸ್ತಾವನೆ

**ಕುಮಾರವ್ಯಾಸ ಮಹಾಕವಿಯ ವಿಚಾರ :**

ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಸರ್ವಶ್ರೇಷ್ಠನಾದ ವಿಶಿಷ್ಟ ಶಕ್ತಿಯ ಸ್ವತಂತ್ರಕವಿ ಕುಮಾರವ್ಯಾಸ. ಈತನ ನಿಜನಾಮ 'ನಾರಣಪ್ಪ', ಸ್ಥಳ ಗದುಗಿನ **ಕೋಳಿವಾಡ**, ಕಾಲ ಕ್ರಿ.ಶ. '೧೪೩೦'. ಎಂದಾದರೂ ೧೩ನೆಯ ಶತಮಾನದಿಂದ ೧೫ನೆಯ ಶತಮಾನದವರೆಗೂ ತೂಗುಯ್ಯಾಲೆಯಾಡುತ್ತಿದೆ. ಈತನ ಪೂರ್ವಿಕರು ಶಾನುಭೋಗ ಅಥವಾ ಕರಣಿಕರ ಮನೆತನಕ್ಕೆ ಸೇರಿದವರು. ಕುಮಾರವ್ಯಾಸನ ಆರಾಧ್ಯದೈವ ಗದುಗಿನ **ವೀರನಾರಾಯಣ**, ಅಂಕಿತನಾಮ **ಕುಮಾರವ್ಯಾಸ**. ನಾರಣಪ್ಪನ ಕೃತಿ '**ಕರ್ಣಾಟಭಾರತ ಕಥಾಮಂಜರಿ**'. ಈ ಕೃತಿಯು ಗದುಗಿನ ಭಾರತ, ಕನ್ನಡಭಾರತ, ಕುಮಾರವ್ಯಾಸ ಭಾರತ, ಕೃಷ್ಣಕತೆ ಹಾಗೂ ದಶಪರ್ವಭಾರತ ಎಂಬ ಹೆಸರುಗಳಿಂದ ಜನಪ್ರಿಯವಾಗಿದೆ.

ಭಕ್ತಕವಿಗಳಲ್ಲಿ ಅಗ್ರಗಣ್ಯನಾದ ಕುಮಾರವ್ಯಾಸನ ಭಾರತಕ್ಕೆ ಮೂಲವಸ್ತು '**ವ್ಯಾಸಕವಿಯ ಮಹಾಭಾರತ**'.

**ರೂಪಕಸಾಮ್ರಾಜ್ಯ ಚಕ್ರವರ್ತಿ**, ಭಾಮಿನಿಷಟ್ಪದಿಕಾರನಾದ ಇವನ ಕಾವ್ಯದಲ್ಲಿ ಹಾಸ್ಯ, ಸರಸ, ಗಾದೆ, ನುಡಿಗಟ್ಟು, ವ್ಯಂಗ್ಯ, ಕಿಡಿನುಡಿ, ವಕ್ರೋಕ್ತಿ, ಜಾಣ್ನುಡಿ, ಕಟಕಿ, ಬಿರುನುಡಿ, ಕಿರಿನುಡಿಗಳು ಹೇರಳವಾಗಿವೆ. ಕುಮಾರವ್ಯಾಸನ ಶೈಲಿ, ಭಾಷೆ ಒಟ್ಟಾರೆ ಕಾವ್ಯದ ದೃಷ್ಟಿಯಿಂದ '**ಕುಮಾರವ್ಯಾಸನ ನೆಲೆ ನಟ್ಟನಡು, ನೆತ್ತಿ ಮುಡಿ**' ಆದರೂ, ಆತ ತಾನು ಲಿಪಿಕಾರ ಎಂದು ಹೇಳಿಕೊಂಡಿರುವುದು ಅವನ ವಿನಯಕ್ಕೆ ಒಂದು ನಿದರ್ಶನವಾಗಿದೆ.

೧. ಹಲಗೆ ಬಳಪವ ಪಿಡಿಯದೊಂದ
ಗ್ಗಳಿಕೆ ಪದವಿಟ್ಟಳುಪದೊಂದ
ಗ್ಗಳಿಕೆ ಪರರೊಡ್ಡವದ ರೀತಿಯ ಕೊಳ್ಳದಗ್ಗಳಿಕೆ
ಬಳಸಿ ಬರೆಯಲು ಕಂಠಪತ್ರದ
ವುಲು ಹುಗೆಡದಗ್ಗಳಿಕೆಯೆಂಬೀ
ಬಲುಹು ಗದುಗಿನ ವೀರನಾರಾಯಣನ ಕಿಂಕರಗೆ.

---

೧. ಕುವೆಂಪು ಮತ್ತು ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರ ಸಂಪಾದನೆಯ 'ಕರ್ಣಾಟ ಭಾರತ ಕಥಾಮಂಜರಿಯ ಮೊದಲನೆಯ ಸಂಧಿಯ ೧೫ನೆಯ ಪದ್ಯ, ಪುಟ ಸಂಖ್ಯೆ ೨.

ಸೂಚನೆ: ಪದ್ಯಗಳಿಗೆ ಕೊಟ್ಟಿರುವ ಸಂಖ್ಯೆಯು ಅಡಿಟಿಪ್ಪಣಿಯ ಆಕರವನ್ನು ಸೂಚಿಸುತ್ತದೆ.

ಕುಮಾರವ್ಯಾಸ ಭಾರತದಲ್ಲಿ ವಿಷ್ಣು, ಶೈವ, ದ್ವೈತ, ಅದ್ವೈತ, ವಿಶಿಷ್ಟಾದ್ವೈತ, ಭಕ್ತಿ ಮಾರ್ಗ, ಜ್ಞಾನಮಾರ್ಗ, ಕರ್ಮಮಾರ್ಗ ಎಲ್ಲವೂ ಮೇಳೈಸಿವೆ.

ಕುಮಾರವ್ಯಾಸನಿಗೆ ಶ್ರೀಕೃಷ್ಣನೇ ಕಾವ್ಯದ ಕಥಾನಾಯಕ, ಆತನೇ ಇಡೀ ಭಾರತದ ಪ್ರೇರಕ, ಪ್ರಚೋದಕ, ಕಾರಣಕರ್ತ. ಆದ್ದರಿಂದಲೇ ಕುಮಾರವ್ಯಾಸನು ತಿಳಿಯ ಹೇಳುವೆ ಕೃಷ್ಣಕಥೆಯನ್ನು ಎಂದು ಕಾವ್ಯ ಆರಂಭಿಸುತ್ತಾನೆ.

ಕವಿ ತನ್ನನ್ನು ಕುಮಾರವ್ಯಾಸ ಯೋಗೀಂದ್ರ, ಕುಮಾರವ್ಯಾಸಮುನಿ, ಶುಕರೂಪ ಎಂದು ಕರೆದುಕೊಂಡಿರುವ, ಈತನ ಕಾವ್ಯ - ಕಾವ್ಯಕ್ಕೆ ಗುರು

೧. ಅರಸುಗಳಿಗಿದು ವೀರ ದ್ವಿಜರಿಗೆ
ಪರಮ ವೇದದ ಸಾರ ಯೋಗಿ
ಶ್ವರರ ತತ್ವವಿಚಾರ ಮಂತ್ರಿ ಜನಕ್ಕೆ ಬುದ್ಧಿಗುಣ
ವಿರಹಿಗಳ ಶೃಂಗಾರ ಕಾವ್ಯಕೆ
ಪರಿಣತರಲಂಕಾರ ಕಾವ್ಯಕೆ
ಗುರುವೆನಲು ರಚಿಸಿದ ಕುಮಾರವ್ಯಾಸಭಾರತವ,

ಈ ಅಂಶಗಳಿಂದ ರಾಷ್ಟ್ರಕವಿ ಕುವೆಂಪು ಅವರು ಕುಮಾರವ್ಯಾಸನ ಬಗ್ಗೆ ಹೀಗೆ ಹೇಳುತ್ತಾರೆ.

೨. ಕುಮಾರವ್ಯಾಸನು ಹಾಡಿದನೆಂದರೆ
ಕಲಿಯುಗ ದ್ವಾಪರವಾಗುವುದು
ಭಾರತ ಕಣ್ಣಲ್ಲಿ ಕುಣಿಯುವುದು! ಮೈಯಲಿ
ಮಿಂಚಿನ ಹೊಳೆ ತುಳುಕಾಡುವುದು!

ಕುಮಾರವ್ಯಾಸನ ಹತ್ತು ಪರ್ವಗಳಲ್ಲಿ ಮೊದಲನೆಯ ಐದು **ಆದಿಪಂಚಕಗಳು** ನಂತರದ ಐದು **ಯುದ್ಧಪಂಚಕಗಳು**. ಒಟ್ಟು ಹತ್ತು ಪರ್ವಗಳಲ್ಲಿ ಉದ್ಯೋಗ ಪರ್ವ ಅತ್ಯಂತ ನಿರ್ಣಾಯಕವಾದುದು, ಮಹಾಭಾರತದ ಉದ್ಯೋಗಪರ್ವವು ಶ್ರೀರಾಮಾಯಣದ ಸುಂದರಕಾಂಡದಂತೆ ಸಾರವತ್ತಾದದ್ದು.

---

೧. ಕುವೆಂಪು ಮತ್ತು ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರ ಸಂಪಾದನೆಯ ಕರ್ಣಾಟ ಭಾರತ ಕಥಾ ಮಂಜರಿಯ ಮೊದಲನೆಯ ಸಂಧಿಯ ೧೯ನೆಯ ಪದ್ಯ, ಪುಟ ಸಂಖ್ಯೆ ೨.

೨. ಕುವೆಂಪು ಮತ್ತು ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರ ಸಂಪಾದನೆಯ ಕರ್ಣಾಟ ಭಾರತ ಕಥಾ ಮಂಜರಿಯ ತೋರಣ ನಾಂದಿ, ಪುಟ ಸಂಖ್ಯೆ ೭.

ಕುಮಾರವ್ಯಾಸನ ಉದ್ಯೋಗಪರ್ವಕ್ಕೆ ಸಂಸ್ಕೃತ ಮಹಾಭಾರತದ ಉದ್ಯೋಗಪರ್ವವೇ ಮೂಲ. ಸಂಸ್ಕೃತ ಭಾರತದಲ್ಲಿ ಹತ್ತು ಉಪಪರ್ವಗಳಲ್ಲಿರುವ ಉದ್ಯೋಗಪರ್ವವನ್ನು ಕುಮಾರವ್ಯಾಸನು ಹನ್ನೊಂದು ಸಂಧಿಗಳಲ್ಲಿ (೭೦೦) ಏಳುನೂರಕ್ಕೂ ಹೆಚ್ಚು ಭಾಮಿನಿಷಟ್ಪದಿಗಳಲ್ಲಿ ಚಿತ್ರಿಸಿದ್ದಾನೆ.

ಗದುಗಿನ ಭಾರತವು ಕನ್ನಡ ನಾಡಿನ ಮನೆ-ಮನೆಯನ್ನು ಬೆಳಗಬಲ್ಲ, ಬೆಳಗಬೇಕಾಗಿರುವ ನಂದಾದೀಪವಾದರೆ ಆ ದೀಪದ ಕುಡಿ ಉದ್ಯೋಗಪರ್ವ.

ವಸ್ತು, ಪಾತ್ರ, ರಸ, ಛಂದಸ್ಸು, ಶೈಲಿ, ಅಲಂಕಾರ, ಭಾಷೆ, ಇವುಗಳ ದೃಷ್ಠಿಯಿಂದ ಪರಿಶೀಲಿಸಿದರೆ ಕನ್ನಡ ಮಹಾಭಾರತದ ಉದ್ಯೋಗಪರ್ವದ ಭಾಗ ಅತ್ಯುತ್ಕೃಷ್ಟವಾದುದು.

ಯುದ್ಧಕ್ಕಾಗಿ ಸೇನೆಯ ಸಂಗ್ರಹಣೆಯಿಂದ ಆರಂಭವಾಗುವ ಉದ್ಯೋಗಪರ್ವದಲ್ಲಿ ಕೌರವ ಪಾಂಡವರ ಸಂಧಿಗಾಗಿ ಶ್ರೀಕೃಷ್ಣನು ಉದ್ಯೋಗಿಸುವುದರಿಂದ ಈ ಪರ್ವಕ್ಕೆ ಉದ್ಯೋಗಪರ್ವವೆಂದು ಹೆಸರು ಬಂದಿದೆ.

ಇಡೀ ಮಹಾಭಾರತದ ಎಲ್ಲಾ ಪಾತ್ರಗಳಿಗೂ ಸೂತ್ರಧಾರಿ ಶ್ರೀಕೃಷ್ಣ. ಎಲ್ಲವೂ ಅವನಂತೆ ನಡೆಯುತ್ತದೆ. ಇತರ ಪರ್ವಗಳಲ್ಲಿ ಅಲ್ಲಲ್ಲಿ ಆಗಾಗ್ಗೆ ಬರುವ ಶ್ರೀಕೃಷ್ಣನ ಪಾತ್ರ, ಉದ್ಯೋಗಪರ್ವದಲ್ಲಿ ಎಲ್ಲವೂ ಅವನಿಂದಲೇ ಅವನೇ ಮುಖ್ಯ/ಶ್ರೇಷ್ಠನಾಗುತ್ತಾನೆ.

ಶ್ರೀಕೃಷ್ಣನು ವ್ಯವಹಾರಕುಶಲ, ಭಕ್ತವತ್ಸಲ, ಲೋಕ ವ್ಯವಹಾರ ಜ್ಞಾನದಿಂದ, ಮೃಧುಮಧುರವಾದ ಹಾಸ್ಯದಿಂದ ತನ್ನ ಪ್ರಭಾವವನ್ನು ಎಲ್ಲರ ಮೇಲೂ ಬೀರಿ ಹಿರಿಯ ಸ್ಥಾನದಲ್ಲಿ ನಿಲ್ಲುತ್ತಾನೆ. ಆದ್ದರಿಂದ 'ಭಾರತೇಸಾರಂ ಉದ್ಯೋಗಃ' ಎಂಬ ಸೂಕ್ತಿ ಮಹಾಭಾರತದ ಸಾರವತ್ತಾದ ಭಾಗ ಉದ್ಯೋಗಪರ್ವ ಎಂಬುದು ವಿಧಿತವಾದುದು.

### ಉದ್ಯೋಗಪರ್ವದ ಸಾರ

ಶ್ರೀಕೃಷ್ಣನು ನೀಡುವ ಸಲಹೆ, ಶ್ರೀಕೃಷ್ಣನು ಅರ್ಜುನನ ಸಾರಥಿಯಾಗುವುದು, ದುರ್ಯೋಧನನ ರಾಜಕೀಯ ನೈಪುಣ್ಯ, ಪಾಂಡವರ ಕಡೆಗೆ ಏಳು ಅಕ್ಷೋಹಿಣಿ, ಕೌರವರ ಕಡೆಗೆ ಹನ್ನೊಂದು ಅಕ್ಷೋಹಿಣಿ, ಕೌರವಸಭೆಯಲ್ಲಿ ದ್ರುಪದನ ಪುರೋಹಿತರು, ಸಂಜಯನ ದೌತ್ಯ, ಧರ್ಮರಾಯನ ಮಂತ್ರಾಲೋಚನೆ, ಶ್ರೀಕೃಷ್ಣಸಂಧಾನ, ಕೌರವ ಸಭೆಗೆ ಕೃಷ್ಣನ ಪ್ರವೇಶ, ಶ್ರೀಕೃಷ್ಣನ ಬಂಧನದ ಪ್ರಯತ್ನ, ವಿಶ್ವರೂಪದರ್ಶನ, ಶ್ರೀಕೃಷ್ಣನ ರಾಜಕೀಯ ಜಾಣ್ಮೆ, ಕುಂತಿ ಕರ್ಣನನ್ನು ಕಂಡದ್ದು, ದೃಷ್ಟದ್ಯುಮ್ನನು ಪಾಂಡವರ ಕಡೆಯ ಮುಖ್ಯ ಸೇನಾಪತಿಯಾದದ್ದು, ಭೀಷ್ಮನು ಕೌರವರ ಮಹಾದಂಡನಾಯಕನಾದದ್ದು, ಪಾಂಡವರ ಸೇನೆ ಕುರುಕ್ಷೇತ್ರದಲ್ಲಿ ಬೀಡು ಬಿಡುವುದು.

ಕುಮಾರವ್ಯಾಸ ಭಾರತದ ಶ್ರೇಷ್ಠವಾದ ಉದ್ಯೋಗಪರ್ವವನ್ನೇ ಕೇಂದ್ರವಾಗಿಟ್ಟುಕೊಂಡು ಸಂಪಾದನಾಕಾರ್ಯ ನಡೆದಿರುವುದು ತೀರ ವಿರಳ. ಕ್ರಿ.ಶ.೧೮೬೫ರಿಂದ ಇಂದಿನವರೆಗೂ ಪ್ರಕಟವಾಗಿರುವ ಲೇಖನಗಳಲ್ಲಿನ ಉದ್ಯೋಗಪರ್ವದ ಸಂಪಾದನಾ ಕಾರ್ಯಕ್ಕೆ ಸಂಬಂಧಪಟ್ಟ ಮಹತ್ವದ ಅಂಶಗಳನ್ನು ಸಾಮಗ್ರಿಯನ್ನಾಗಿಸಿಕೊಂಡು ಅವುಗಳನ್ನು ಸಮೀಕ್ಷಿಸುವುದೇ ನನ್ನ ಅಧ್ಯಯನದ ಉದ್ದೇಶ.

* * * * *

# ಅಧ್ಯಾಯ - ೨

## ಉದ್ಯೋಗ ಪರ್ವಗಳ ವಿವಿಧ ಪ್ರಕಟಣೆಗಳು

೧) ''ಕನ್ನಡ ಮಹಾಭಾರತ ಉದ್ಯೋಗ ಪರ್ವ ಸಂಗ್ರಹ''ವನ್ನು ಸಂಪಾದಕರಾದ 'ತ.ಸು.ಶಾಮರಾಯ'ರು ೧೯೫೬ರಲ್ಲಿ ತಳುಕಿನ ವೆಂಕಟಣ್ಣಯ್ಯನವರ ಸ್ಮಾರಕ ಗ್ರಂಥ ಮಾಲೆಯಿಂದ ಪ್ರಕಟಿಸಿ ಅವರ ಮುನ್ನುಡಿಯಲ್ಲಿ ಈ ಅಂಶಗಳನ್ನು ಪ್ರಸ್ತಾಪಿಸಿದ್ದಾರೆ.

ವಿಶ್ವ ಸಾಹಿತ್ಯದ ಗಣ್ಯ ಸ್ಥಾನದಲ್ಲಿರುವ ವ್ಯಾಸ ಮಹಾಋಷಿಯ ಸಂಸ್ಕೃತದ ಮಹಾಭಾರತ ಭಾರತದ ಸಾಹಿತ್ಯದಲ್ಲೇ ಅತ್ಯಂತ ಶ್ರೇಷ್ಠವಾದದು. ಈ ಬೃಹತ್ ಕೃತಿಯನ್ನು ಕನ್ನಡದ ಕವಿಗಳು ತಮ್ಮದೇ ಆದ ಶೈಲಿ ದೃಷ್ಟಿಕೋನಗಳಿಂದ ಅವುಗಳನ್ನು ರಚಿಸಿದ್ದಾರೆ. ಈ ಸಾಲಿನಲ್ಲಿ ಜನಪ್ರಿಯವಾದ ಕಾವ್ಯ ಗದುಗಿನ ಭಾರತವಾಗಿದೆ.

ಕಾವ್ಯ ರಚನೆಯಾಗಿ ಐದು ಶತಮಾನಗಳು ಕಳೆದರು ಅದರ ಹಿರಿಮೆಗೆ ಎಲ್ಲೂ ಧಕ್ಕೆ ಬಂದಿಲ್ಲ. ಆದ್ದರಿಂದ ಸಾಹಿತ್ಯಾಭಿರುಚಿಯ ರಸಿಕರಿಗೆ, ಕವಿಯ ಪ್ರತಿಭೆಗೆ, ವ್ಯಕ್ತಿತ್ವಕ್ಕೆ, ಲೋಪವಾಗದಂತೆ ಸಂಗ್ರಹಿಸಿ ಸಂಪಾದಿಸುವುದು ಸಂಪಾದಕರ ಗುರಿ.

ವೆಂಕಣ್ಣನವರ ಅಚ್ಚುಮೆಚ್ಚಿನ ಕಾವ್ಯವಾದ್ದರಿಂದ ಅವರು ಗದುಗಿನ ಭಾರತದ ಹಲವಾರು ಓಲೆಯ ಪ್ರತಿಗಳನ್ನು ಸಂಪಾದಿಸಿದ್ದು, ಇವರಿಗೆ ನೆರವಾಯಿತು.

- ಮೈಸೂರಿನ ಓರಿಯಂಟಲ್ ರಿಸರ್ಚ್ ಇನ್‌ಸ್ಟಿಟ್ಯೂಟನಲ್ಲಿರುವ ಕ. ೨೦೫೨ನೆಯ ನಂಬರಿನ ಓಲೆಯ ಪ್ರತಿ ಕೃತಿ. ಇದು ಕ್ರಿ.ಶ. ೧೫೫೪ರಲ್ಲಿ ಹುಟ್ಟಿದ ಈ ಪ್ರತಿ ಕೈಬರಹದ ಪ್ರತಿಗಳಲ್ಲಿ ಅತ್ಯಂತ ಪ್ರಾಚೀನವಾದುದು.
- ಶ್ರೀ ಡಿ.ಎಲ್.ನರಸಿಂಹಾಚಾರ್ಯರು ಕೊಟ್ಟ ಅಳಿಲು ಘಟ್ಟದ ಪ್ರತಿ 'ಗ' ಎಂಬ ಚಿಹ್ನೆಗಳೊಂದಿಗೆ ಕೊಟ್ಟು ಬಳಸಲಾಗಿದೆ.
- ಶ್ರೀ ಆರ್.ಬಿ.ಪ್ರೋದ್ದಾರ್ ಅವರು ಕೊಟ್ಟ ಕಾರವಾರಿನ ಪ್ರತಿ 'ಕಾ' ಪ್ರತಿ.

ಇವುಗಳೊಂದಿಗೆ,

- ೧೭೩೮ರಲ್ಲಿ ಚಿಕ್ಕ ಜಾಜೂರಿನಲ್ಲಿ ತಯಾರಾದ 'ಜ' ಪ್ರತಿ
- ಶ್ರೀ ಎ.ಎನ್. ಕೃಷ್ಣಶೆಟ್ಟರು ಕೊಟ್ಟ 'ಹ' ಪ್ರತಿ. (ಎರಡು ಸಂಧಿಗಳನ್ನು ಮಾತ್ರ)

ಈ ಉದ್ಯೋಗಪರ್ವ ಕೆಲವು ವಿಶ್ವವಿದ್ಯಾಲಯಗಳಿಗೆ ಪಠ್ಯಪುಸ್ತಕವಾಗಿರುವುದು ಗಮನಾರ್ಹ ಸಂಗತಿ.

- ಮೈಸೂರು ವಿಶ್ವವಿದ್ಯಾಲಯದ ೧೯೪೯ ಇಂಟರ್ ಮೀಡಿಯಟ್ ಪರೀಕ್ಷೆಗೆ ಪಠ್ಯಪುಸ್ತಕ.
- ಬೊಂಬಾಯಿ ವಿಶ್ವವಿದ್ಯಾಲಯದ ಇಂಟರ್ ಮೀಡಿಯಟ್‌ಗೆ ಪಠ್ಯಪುಸ್ತಕ.
- ಬೆಂಗಳೂರು ವಿಶ್ವವಿದ್ಯಾಲಯ ಇದನ್ನು ಡಿಗ್ರಿ ಪರೀಕ್ಷೆಯ ಪಠ್ಯಪುಸ್ತಕವಾಗಿ ಆಯ್ಕೆ ಮಾಡಿತು.

ಪೀಠಿಕೆಯ ಭಾಗದಲ್ಲಿ, ಕವಿ ಚರಿತೆ, ಕಾವ್ಯದ ಮೂಲ/ಹಿರಿಮೆ, ಪಂಪ, ನಾರಾಣಪ್ಪ, ಇತರ ಭಾರತ ಕರ್ತೃಗಳು, ಉದ್ಯೋಗಪರ್ವದ ಕಥೆ, ವಿಮರ್ಶೆ ಹಾಗೂ ಪಾತ್ರ ಪರಿಚಯದ ಬಗ್ಗೆ ಚರ್ಚಿಸುತ್ತಾರೆ.

ಕವಿಯ ಕಾಲದ ಬಗ್ಗೆ ಹಲವಾರು ಭಿನ್ನಾಭಿಪ್ರಾಯಗಳನ್ನು ಸೂಕ್ಷ್ಮವಾಗಿ ಚರ್ಚಿಸಲಾಗಿದ್ದು. ಒಟ್ಟಾರೆ ಕವಿಯ ಕಾಲ, ಸ್ಥಳ, ಕುಲ, ಕೃತಿಯ ಬಗ್ಗೆ ಇತರ ಅಭಿಪ್ರಾಯವನ್ನು ಪೀಠಿಕೆಯಲ್ಲಿ ಕಾಣಬಹುದು.

ಸಾಹಿತ್ಯದ ಮೂಲಕ ಸಂಸ್ಕೃತಿಯನ್ನು ಸೃಷ್ಠಿ ಮಾಡುವ ಮಹಾಭಾರತ ಮಾನವ ಇತಿಹಾಸದಲ್ಲಿ ಏಕೈಕವೂ, ಮಹತ್ವವೂ ಆಗಿದೆ. ಧರ್ಮ ಗ್ರಂಥಮಾತ್ರವಲ್ಲದೆ ಸಂಸ್ಕೃತಿಯನ್ನು ಒಳಗೊಂಡ ಒಂದು ಇತಿಹಾಸ. ಈ ನಿಟ್ಟಿನಲ್ಲಿ ಬೃಹತ್ ಮಹತ್ವಗಳೆರಡರಲ್ಲಿಯೂ ಶ್ರೇಷ್ಠವಾಗಿದೆ.

ಮಹಾಭಾರತ ಕಾವ್ಯ ವಸ್ತುವಾಗಿ ಅನೇಕ ಕವಿಗಳ ವಿಷಯ ವಸ್ತುವಾಗಿದ್ದರೂ, ಪಂಪ-ನಾರಾಣಪ್ಪರು ಪ್ರಮುಖರಾಗಿರುತ್ತಾರೆ.

ಪಂಪ ತನ್ನ ದೊರೆಗಾಗಿ ಕಾವ್ಯ ರಚಿಸುತ್ತಾನೆ. ದೊರೆಯೇ ಕಥಾನಾಯಕ. ಪಂಪನ ಆಶಯ ಆಸ್ಥಾನದ ಕವಿಗಳು ಹಾಗೂ ದೊರೆ ಮೆಚ್ಚಬೇಕು. ಆದುದರಿಂದ ಕಾವ್ಯ ಪ್ರೌಢವಾಗಿ, ಪಾಂಡಿತ್ಯದಿಂದ ಕೂಡಿದೆ. ಗಂಭೀರವಾಗಿ ಹರಿಯುವ ಪ್ರವಾಹ ಪಂಪನದು.

'ನಾರಣಪ್ಪ'ನ ಕಾವ್ಯ ಹಿಮಾಲಯದಲ್ಲಿ ಹುಟ್ಟಿ, ಬೆಟ್ಟಗಳನ್ನು ಹತ್ತಿ ಪ್ರಪಾತಕ್ಕೆ ಧುಮ್ಮಿಕ್ಕಿ ಬೋರ್ಗರೆಯುತ್ತದೆ.

ಪಂಪನ ಕಾವ್ಯಕ್ಕೆ ಅಲಂಕಾರ, ಛಂದಸ್ಸು, ವ್ಯಾಕರಣದ ಕಡಿವಾಣವಿದ್ದರೆ ನಾರಾಣಪ್ಪನ ಕಾವ್ಯ ಸ್ವಚ್ಛಂದವಾಗಿ ಹರಿಯುತ್ತವೆ.

ಪಂಪನ ಕಾವ್ಯ ಜೈನಧರ್ಮಕ್ಕೆ ಕಟ್ಟು ಬೀಳುವುದರಿಂದ ಭಾರತದ ಅನೇಕ ಘಟನೆಗಳು ಅವನಿಗೆ ಅನುಗುಣವಾಗಿ ಬದಲಾಗುತ್ತದೆ.

ಉದಾ : (ಪಂಚವಲ್ಲಭೆ ದ್ರೌಪದಿ ಇಲ್ಲಿ ಅರ್ಜುನನ ದ್ರೌಪದಿ ಮಾತ್ರ)

ನಾರಾಣಪ್ಪನ ನಾಯಕ - ಶ್ರೀಕೃಷ್ಣ ಇಲ್ಲಿ ದೈವ ಕುಣಿಸಿದಂತೆ (ಕೃಷ್ಣ ಕುಣಿಸಿದಂತೆ) ಇತರ ಪಾತ್ರಗಳು ಕುಣಿಯುತ್ತವೆ. ಪಂಪ ಒಂದು ಪದ್ಯದಲ್ಲಿ ಹೇಳುವ 'ಜರಾಸಂಧವಧೆ' ನಾರಾಣಪ್ಪನಲ್ಲಿ ೧೨೯ ಪದ್ಯಗಳ ಒಂದು ಸಂಧಿಯಾಗುತ್ತದೆ.

ನಂಜರಾಜ, ಚಾಟುವಿಠಲನಾಥ, ಶೀನಿವಾಸ, ಲಕ್ಷ್ಮಕವಿ, ಪರಮದೇವ, ತಿಮ್ಮಣ್ಣಕವಿ, ಜಕ್ಕ ಭೂಪಾಲ, ಸುಕುಮಾರ ಭಾರತಿ ಮುಂತಾದವರ ಕೃತಿಗಳನ್ನೂ ಇಲ್ಲಿ ಪ್ರಸ್ತಾಪಿಸಲಾಗಿದೆ.

ಪಾಂಡವರ ವನವಾಸದ ನಂತರ ಅಜ್ಞಾತವಾಸದ ಅವಧಿ ಮುಗಿಸಿ ಕೌರವನಿಗೆ ಐದು (೫) ಊರುಗಳನ್ನು ಕೇಳುವುದು. ಕೃಷ್ಣ ಸಂಧಾನಕ್ಕೆ ಹೋಗುವುದು. ಕೌರವನ ಸಭೆಯಲ್ಲಿ ಕೃಷ್ಣನ ವಿಶ್ವರೂಪ ದರ್ಶನ, ಕುಂತಿ ಕರ್ಣನನ್ನು ಬೇಡುವುದು, ಹಾಗೂ ಯುದ್ಧ ನಿಶ್ಚಯವಾಗುವುದು.

ವಸ್ತು, ಪಾತ್ರ, ರಸಗಳ ದೃಷ್ಟಿಯಿಂದ ಉದ್ಯೋಗಪರ್ವ ಅತ್ಯುತ್ಕೃಷ್ಟವಾಗಿದೆ. ಸಂಸ್ಕೃತ ಮಹಾಭಾರತದ ಉದ್ಯೋಗಪರ್ವದಲ್ಲಿ ೧೯೬ ಅಧ್ಯಾಯಗಳಿವೆ. ಕುಮಾರವ್ಯಾಸ ಇದನ್ನು ೧೧ ಸಂಧಿಗಳ ೭೦೦ ಕ್ಕೂ ಹೆಚ್ಚು ಭಾಮಿನಿಷಟ್ಪದಿಯಲ್ಲಿ ಸಂಗ್ರಹಿಸಿದ್ದಾನೆ. ಕುಮಾರವ್ಯಾಸ ಕೆಲವು ಕಡೆ ಕೆಲವು ಸಂಗತಿಗಳನ್ನು ಅವನಿಗನುಗುಣವಾಗಿ ಬದಲಿಸಿಕೊಂಡಿದ್ದಾನೆ.

ಶ್ರೀ ಕೃಷ್ಣ ದುರ್ಯೋಧನ ಮತ್ತು ಕರ್ಣನ ಪಾತ್ರವನ್ನು ಸೂಕ್ಷ್ಮವಾಗಿ ಪರಿಚಯಿಸುತ್ತಾರೆ.

**ಈ ಕೃತಿಯಲ್ಲಿನ ಶೀರ್ಷಿಕೆಗಳು**

| | |
|---|---|
| ೧. ಮಂಗಳಾಚರಣೆ | - ೬ ಪದ್ಯಗಳು. |
| ೨. ಸಾರಥಿ ತನವ ಕೈಕೊಂಡನು | - ೩೪ ಪದ್ಯಗಳು. |
| ೩. ಮುಗುಳಳು ಪಿದರೆ ರಾಜ್ಯದ ಪದವಿಗನುಚಿತವಾಯ್ತು | - ೩೯ ಪದ್ಯಗಳು. |
| ೪. ತೊಡೆಗಳಿಗೆ ಸುಕ್ಷೇಮವೇ | - ೨೧ ಪದ್ಯಗಳು. |
| ೫. ಕಾಳಗವನೇ ಒಲಿದು ಬಹೆನು | - ೪೭ ಪದ್ಯಗಳು. |
| ೬. ನಾಳೆ ಬರಹೇಳು | - ೫೧ ಪದ್ಯಗಳು. |
| ೭. ಕೇಡಿಗರ ಮಾಲೆಂಗೊಡ ಬಡದಿರು | - ೫೯ ಪದ್ಯಗಳು. |
| ೮. ಒಲಿದವರನುಜ್ಜೀವಿಸುವ ಬಗೆ | - ೩೪ ಪದ್ಯಗಳು. |
| ೯. ಕೌಂತೇಯರ ಸಮಗ್ರದ ಬೀಡು | - ೩೦ ಪದ್ಯಗಳು. |
| ಒಟ್ಟು | - ೩೨೧ ಪದ್ಯಗಳು. |

ಅಂತಿಮವಾಗಿ ಪೂರ್ವಕಥೆಗಳು, ಶಬ್ದಕೋಶವನ್ನು ಒಳಗೊಂಡಿದ್ದು ೬ ಬಾರಿ ಮುದ್ರಣಗೊಂಡಿದೆ.

| | |
|---|---|
| ಮೊದಲ ಮುದ್ರಣ | - ೧೯೪೬ |
| ಎರಡನೆಯ ಮುದ್ರಣ | - ೧೯೪೭ |
| ಮೂರನೆಯ ಮುದ್ರಣ | - ೧೯೪೮ |
| ನಾಲ್ಕನೆಯ ಪರಿಷ್ಕೃತ ಮುದ್ರಣ | - ೧೯೫೦ |
| ಐದನೆಯ ಮುದ್ರಣ | - ೧೯೬೭ |
| ಆರನೆಯ ಮುದ್ರಣ | - ೧೯೬೮ |

* * * * *

೨) "ಕುಮಾರವ್ಯಾಸ ಮಹಾಕವಿ ವಿರಚಿತ ಕರ್ಣಾಟಕ ಮಹಾಭಾರತ ಉದ್ಯೋಗಪರ್ವ"ವನ್ನು ಸಂಪಾದಕರಾದ 'ಎಸ್.ಎನ್.ಕೃಷ್ಣಜೋಯಿಸ್'ರು ೧೯೩೫ರಲ್ಲಿ ಓರಿಯಂಟಲ್ ರಿಸರ್ಚ್ ಇನ್‌ಸ್ಟಿಟ್ಯೂಟ್ ಪಬ್ಲಿಕೇಶನ್ಸ್‌ನಿಂದ ಪ್ರಕಟಿಸಿದ ಇವರು ಪ್ರಸ್ತಾವನೆಯಲ್ಲಿ ಹೀಗೆ ಹೇಳುತ್ತಾರೆ.

ಕೆಲವು ವಿಶ್ವವಿದ್ಯಾನಿಲಯಗಳಲ್ಲಿ ಈ ಕಾವ್ಯ ಪಠ್ಯಪುಸ್ತಕವಾಗಿದ್ದು, ಮರುಮುದ್ರಣದಲ್ಲಿ ಕೆಲವು ಮಾರ್ಪಾಡುಗಳನ್ನು ಮಾಡಿ ಕವಿಯ ಕಾಲ, ದೇಶ, ಮತಗಳ ವಿಷಯಕ್ಕೆ ಹೆಚ್ಚಿನ ಆದ್ಯತೆ ನೀಡಿಲ್ಲ. ಉದ್ಯೋಗಪರ್ವದ ಕಥೆಯನ್ನು ಪ್ರಕೃತಪರ್ವಕ್ಕೆ ಸಂಬಂಧಪಟ್ಟಂತೆ ವ್ಯಾಸಭಾರತ - ಕುಮಾರವ್ಯಾಸಭಾರತಗಳಿಗೂ, ಪಂಪಭಾರತ ನಾರಣಪ್ಪನ ಭಾರತಗಳಿಗೂ ದೂತವಾಕ್ಯ ಗದುಗಿನ ಭಾರತಗಳಿಗೂ ಇರುವ ಸಾಮ್ಯವೈಷಮ್ಯಗಳನ್ನು ತೋರಿಸಲಾಗಿದೆ. ಇವರು ಮುದ್ರಣಕ್ಕೆ ಮೈಸೂರು ಅರಮನೆಯ ಸರಸ್ವತೀ ಭಂಡಾರದಲ್ಲಿರುವ ಮೂರು ಪ್ರತಿಗಳನ್ನು ಬಳಸಿಕೊಂಡಿರುವ ಅಂಶಗಳನ್ನು ಈ ಪ್ರಸ್ತಾವನೆಯಲ್ಲಿ ಕಾಣಬಹುದು.

ಎನ್. ಎಸ್. ಕೃಷ್ಣಜೋಯಿಸರ ಪೀಠಿಕೆಯ ಭಾಗದಲ್ಲಿ ಕಥಾಸಾರ, ಕಾವ್ಯರಚನೆ, ಗ್ರಂಥರಚನೆ, ವರ್ಣನೆ ಮತ್ತು ಭಾವಾನುವಾದ, ಕಥಾ ಸಂಧರ್ಭ, ಪರಿಷ್ಕರಣದ ಬಗ್ಗೆ ಹೇಳುವುದಾದರೆ, ಗದುಗಿನ ಭಾರತವೆಂದೂ, ಭಾರತಕಥಾಮಂಜರಿಯೆಂದು ಪ್ರಸಿದ್ಧವಾಗಿರುವ ಈ ಷಟ್ಪದೀಕಾವ್ಯವು ಕನ್ನಡ ನಾಡಿನ ಎಲ್ಲ ರಸಿಕರ ಮನವನ್ನು ಸೂರೆಗೊಂಡಿದೆ. ಈ ಕಾವ್ಯಕುಸುಮ ಮಂಜರಿಯು ಎಂದೆಂದಿಗೂ ಬಾಡದ ಚೆಲುವುಳ್ಳದ್ದು, ಎಂದೆಂದಿಗೂ ಅಳಿಯದ ಕಂಪುಳ್ಳದ್ದು. ಕವಿಯ ಕಾಲದ ಬಗ್ಗೆ ಎಷ್ಟೇ ಭಿನ್ನಾಭಿಪ್ರಾಯಗಳಿದ್ದರೂ ಈ ಮಹಾಕವಿ ನಮ್ಮವನು.

ನಾರಣಪ್ಪನ ಮಹಾಕವಿಯ ಕನ್ನಡ ಮಹಾಭಾರತ ಉದ್ಯೋಗಪರ್ವವು ಶ್ರೀರಾಮಾಯಣದ ಸುಂದರಕಾಂಡದಂತೆ ಸಾರವತ್ತಾದದ್ದು ಈ ಪರ್ವದ ಕಥಾಭಾಗವು ಸೇನೆಯ ಉದ್ಯೋಗದಿಂದ ಆರಂಭವಾಗಿ, ಕೌರವ-ಪಾಂಡವರ ಸಂಧಿಗಾಗಿ ಕೃಷ್ಣನು ಉದ್ಯೋಗಿಸುತ್ತಾನೆ. ಆದಕಾರಣ ಈ ಪರ್ವಕ್ಕೆ ಉದ್ಯೋಗಪರ್ವವೆಂದು ಹೆಸರು ಬಂದಿದೆ.

ಗದುಗಿನ ಭಾರತವು ಕನ್ನಡದೇಶದ ಮನೆ-ಮನೆಯನ್ನು ಬೆಳಗಬಲ್ಲ ಬೆಳಕಾಗಿರುವ ನಂದಾದೀಪವೆಂದರೆ ಆ ದೀಪದ ಕುಡಿ ಉದ್ಯೋಗಪರ್ವ ಎಂಬ ವಿಷಯವನ್ನು ಪೀಠಿಕೆಯಲ್ಲಿ ವ್ಯಕ್ತಪಡಿಸುತ್ತಾರೆ.

ಒಂದನೆಯ ಸಂಧಿಯಿಂದ ಹನ್ನೊಂದನೆಯ ಸಂಧಿಯವರೆಗಿನ ಪದ್ಯಗಳಿಗೆ ಗದ್ಯರೂಪದಲ್ಲಿ ಕಥೆಯನ್ನು ಸ್ಪಷ್ಟವಾಗಿ ವಿವರಿಸುತ್ತಾರೆ. ಈ ಕಥಾಸಾರವನ್ನು ಗದ್ಯಾನುವಾದವೆಂದರೂ ತಪ್ಪಾಗಲಾರದು.

ಕುಮಾರವ್ಯಾಸ ಭಾರತಕ್ಕೆ ಮೂಲವಸ್ತು ವ್ಯಾಸಭಾರತವಾದರೂ, ಕುಮಾರವ್ಯಾಸ ಮಾಡಿಕೊಂಡಿರುವ ಮಾರ್ಪಾಡುಗಳು ಪಂಪಭಾರತಕ್ಕೆ ಅನುಗುಣವಾಗಿ ಮಾಡಿಕೊಂಡಿರುವ ಸಂಗತಿಗಳು, ಸಂಸ್ಕೃತ ಭಾಷೆಯ ಪಾಂಡಿತ್ಯ ಶ್ಲೋಕಗಳನ್ನು ಕನ್ನಡಕ್ಕೆ ಭಾಷಾಂತರಿಸಿರುವುದು, ಈ ಕಥಾಪಟದಲ್ಲಿ ತನ್ನ ಕಾಲ್ಪನಿಕ ಚಿತ್ರವನ್ನು ಚಿತ್ರಿಸಿ ಭಾರತಕಥಾಚಿತ್ರವನ್ನು ಕನ್ನಡ ನಾಡಿನ ಎಲ್ಲಾ ಜನರ ಮುಂದಿರಿಸಿರುತ್ತಾರೆ. ಹಾಗೆ ತನ್ನ ಕಾವ್ಯದಲ್ಲಿ ಜನಸಾಮಾನ್ಯರ ನುಡಿ. ನುಡಿಗಟ್ಟು. ಪ್ರತಿಯೊಂದಕ್ಕೂ ಪದಗಳನ್ನು ಉದಾಹರಣೆಯಾಗಿ ನೀಡುತ್ತಾರೆ. ಕೆಲವು ಕಡೆಗಳಲ್ಲಿ ಮೂಲವನ್ನೇ ಕನ್ನಡಕ್ಕೆ ಭಾಷಾಂತರ ಮಾಡಿರುತ್ತಾನೆ. ಹೀಗೆ ಹಲವಾರು ಅಂಶಗಳಿಂದ ಕವಿಯ ಅಸಾಧಾರಣ ಪ್ರತಿಭೆ ಸ್ಪಷ್ಟವಾಗುತ್ತದೆ.

ಪಂಪನನ್ನು ಕುಮಾರವ್ಯಾಸ ಅನುಸರಿಸಿರುವುದನ್ನು ಮೂರು ರೀತಿಯಲ್ಲಿ ವಿಂಗಡಿಸುತ್ತಾರೆ.

೧. ಗ್ರಂಥ ರಚನೆ

೨. ವರ್ಣನೆ ಮತ್ತು ಭಾವಾನುವಾದ ಹಾಗೂ

೩. ಕಥಾಸಂದರ್ಭ.

ಈ ಮೂರು ಅಂಶಗಳನ್ನು ಪದ್ಯಗಳಿಗೆ ಅನುಗುಣವಾಗಿ ಉದಾಹರಣೆಯೊಂದಿಗೆ ವಿವರಿಸುತ್ತಾರೆ.

ಉದ್ಯೋಗಪರ್ವದಲ್ಲಿ ಬರುವ ಉಪಾಖ್ಯಾನಗಳನ್ನು ಕವಿಯು ಸೇರಿಸಿರುವ ಹೊಸ ಸನ್ನಿವೇಶಗಳನ್ನು ಉದ್ಯೋಗಪರ್ವದಲ್ಲಿ ಕಂಡುಬರುವ ಕೆಲವು ನ್ಯೂನತೆಗಳನ್ನು ವರ್ಣನೆ - ಅಲಂಕಾರಗಳನ್ನು ಉತ್ಪ್ರೇಕ್ಷೆ, ರೂಪಕ, ಉಪಮಾ, ಪಾತ್ರವಿಚಾರ ಎಲ್ಲವನ್ನು ಸೂಕ್ಷ್ಮವಾಗಿ ಉದಾಹರಣೆಗಳೊಂದಿಗೆ ಪರಿಚಯಿಸುತ್ತಾರೆ.

ಪಂಪನು ತನಗೆ ಹಿಂದಿದ್ದ ಯಾವ ಕವಿಯನ್ನು ಭಾರತಕಾವ್ಯದಲ್ಲಿ ಸ್ತುತಿಸಿಲ್ಲ. ಆದರೆ ಕುಮಾರವ್ಯಾಸ ವ್ಯಾಸನನ್ನು ಮಾತ್ರ ಸ್ಮರಿಸುತ್ತಾರೆ. ಬೇರೆ ಯಾವ ಕವಿಯನ್ನು ತನ್ನ ಗ್ರಂಥದಲ್ಲಿ ಸ್ತುತಿಸಿಲ್ಲ.

- ಪಂಪನು ಪೆಱವುಮು ಪಾಖ್ಯಾನ ಕತೆಗಳೊಳವೊಂದಂ

ಕುಂದಲೀಯದೆ ಪೇಳ್ದಂ ಎಂದು ಹೇಳಿಕೊಂಡಿರುತ್ತಾನೆ. ಕುಮಾರವ್ಯಾಸ ವ್ಯಾಸ ಭಾರತದಲ್ಲಿ ಪ್ರಾಸಂಗಿಕವಾಗಿ ಹೇಳಿರುವ ಉಪಾಖ್ಯಾನಗಳನ್ನು ತನ್ನ ಗ್ರಂಥದಲ್ಲಿ ಒಂದೊಂದು ಪದ್ಯದಿಂದಲೇ ತಿಳಿಸುತ್ತಾನೆ.

- ಪಾಂಡವರ ಸೇನೆಯು ಕುರುಕ್ಷೇತ್ರದಲ್ಲಿ ಬೀಡು ಬಿಟ್ಟ ಬಗೆಯನ್ನು ಮಾತ್ರ ತಿಳಿಸಿ ಕೌರವಸೇನೆ ಬರುವುದನ್ನು ಹೇಳುವುದಿಲ್ಲ. ಈ ಅಂಶದಲ್ಲಿ ಕುಮಾರವ್ಯಾಸನು ಪಂಪನನ್ನೇ ಅನುಸರಿಸಿ ಪಾಂಡವಸೇನೆ ಮಾತ್ರ ಕುರುಕ್ಷೇತ್ರಕ್ಕೆ ಬರುವುದನ್ನು ಮಾತ್ರ ತಿಳಿಸುತ್ತಾನೆ.
- ಕೃಷ್ಣ ದುರ್ಯೋಧನನನ್ನು ಕಾಣಲು ಬರುವ ಸುದ್ದಿಯನ್ನು ವಿದುರನು ಆತನಿಗೆ ತಿಳಿಸಲು ದುರ್ಯೋಧನನೇ ಸಭೆಯನ್ನು ರಚಿಸಿದನೆಂದು ಪಂಪ ತಿಳಿಸಿದಂತೆ ಕುಮಾರವ್ಯಾಸನು ಅದನ್ನು ಮಾತ್ರ ತಿಳಿಸುತ್ತಾನೆ.

**ಉದಾಹರಣೆ :** "ತೊಡೆಸೋಂಕಿ ಕುಳ್ಳಿರಿಸಿ" ಎಂದು ಪಂಪಭಾರತದ ಆಶ್ವಾಸ೯ ಪದ್ಯ ೨೮ ಆದಮೇಲೆ ಇರುವ ಗದ್ಯದಲ್ಲಿದೆ.

ತೊಡೆಸೋಂಕಿನಲಿ ಸಾರಿದು ಎಂದು ಕುಮಾರವ್ಯಾಸ ಭಾರತದ ೧೧ ಸಂಧಿಯ ಪದ್ಯ ೨ರಲ್ಲಿ ಈ ರೀತಿ ಇದೆ.

೧. ಪಿಡಿಯೆಂ ಪುರಿಗಣೆಯಂ ನರ
ನೆಡೆಗೊಂಡೊಡ ಮುಳಿದ ನಿನ್ನ ಮಕ್ಕಳನಿನ್ನೇ।
ದ್ರೋಡಮಳಿಯೆಂ ಪೆರ್ಜಸಮನೆ
ಪಿಡಿದೆನ್ನನೆ ರಣಮೊಳಳಿವೆನಿರದಡಿಯೆತ್ತಂ॥

ಎಂದು ಪಂಪಭಾರತದ ಆಶ್ವಾಸ೯, ಪದ್ಯ ೮೭ರಲ್ಲಿ ಈ ರೀತಿ ಇದ್ದರೆ ಕುಮಾರವ್ಯಾಸ ಭಾರತದ ೧೧ನೆಯ ಸಂಧಿ ೩೬ನೆಯ ಪದ್ಯ ಈ ರೀತಿ ಇದೆ.

ಆದಡೈವರು ಮಕ್ಕಳನು ತಲೆಗಾದು ತೋಜೈಕಂದ
ಹೋದಬಾಣವ ಮರಳಿತೊಡದಿರು ಮಾದುಕಳೆ ವೈರವನೆನಿಲ್ಕೆಹ
ಸಾದವೆಂದನು ಬೀಳುಕೊಂಡನು ಬಂದನರಮನೆಗೆ ಎಂದಿದೆ

ಈ ರೀತಿ ಅನೇಕ ಉದಾಹರಣೆಗಳೊಂದಿಗೆ ಉದ್ಯೋಗಪರ್ವದಲ್ಲಿ ಬರುವ ಉಪಖ್ಯಾನಗಳು, ನಹುಷೋಪಾಖ್ಯಾನಗಳನ್ನು, ಕವಿ ಸೇರಿಸಿರುವ ಹೊಸ ಸನ್ನಿವೇಶಗಳನ್ನು, ಕುಮಾರವ್ಯಾಸಭಾರತದ ಉದ್ಯೋಗಪರ್ವದಲ್ಲಿ ಕಂಡು ಬರುವ ಕೆಲವು ನ್ಯೂನತೆಗಳನ್ನು, ವರ್ಣನೆ, ಅಲಂಕಾರಗಳು, ಪಾತ್ರವಿಚಾರಗಳನ್ನು ಉದಾಹರಣೆಗಳೊಂದಿಗೆ ಸಂಪಾದಕರು ನೀಡಿರುವುದನ್ನು ಕಾಣಬಹುದು.

---

೧. ಎಸ್. ಎನ್. ಕೃಷ್ಣಜೋಯಿಸ್ ಸಂಪಾದಿಸಿರುವ ಉದ್ಯೋಗಪರ್ವದ ೭ನೆಯ ಪದ್ಯ, ಪುಟ ಸಂಖ್ಯೆ, ೭೪.

ಎಸ್.ಎನ್. ಕೃಷ್ಣಜೋಯಿಸರು ಸಂಪಾದನ ಕಾರ್ಯಕ್ಕೆ ಬಳಸಿರುವ ಒಟ್ಟು ೧೮ ಪ್ರತಿಗಳು ಪ್ರತಿಯ ರೂಪುರೇಷೆಗಳನ್ನು, ರಚನೆಯ ಕಾಲ, ರಚನೆಕಾರರನ್ನು ಅದರ ವಿಶೇಷತೆಗಳನ್ನು ವಿಶೇಷ ಮಾಹಿತಿಗಳನ್ನು ಸ್ಪಷ್ಟವಾಗಿ ತಿಳಿಸುತ್ತಾ ಹೆಚ್ಚಿನ ಪದ್ಯಗಳು, ಸಂಧಿ ಸಂಖ್ಯೆ ಹೆಚ್ಚಾಗಲು ಕಾರಣ ಹಾಗೂ ಸಂಧಿ ಮತ್ತು ಪದ್ಯ ಸಂಖ್ಯೆಗಳನ್ನು ಪಟ್ಟಿಯ ಮೂಲಕ ತಿಳಿಸುತ್ತಾರೆ.

**ಇವರ ಉದ್ಯೋಗಪರ್ವ ಒಳಗೊಂಡಿರುವ ಶೀರ್ಷಿಕೆಗಳು**

ಒಂದನೆಯ ಸಂಧಿ : ಭಕ್ತಕುಟುಂಬಿ ಮುರವೈರಿಯು ಅರ್ಜುನನಿಗೆ ಸಾರಥಿಯಾಗುವುದು. - ೪೫ ಪದ್ಯಗಳು

ಎರಡನೆಯ ಸಂಧಿ : ಶಲ್ಯನ ವೃತ್ತಾಂತ ಮತ್ತು ಸಂಜಯನ ದೌತ್ಯ. - ೪೯ ಪದ್ಯಗಳು

ಮೂರನೆಯ ಸಂಧಿ : ವಿದುರ ನೀತಿ. - ೧೩೦ ಪದ್ಯಗಳು

ನಾಲ್ಕನೆಯ ಸಂಧಿ : ಸನತ್ಸುಜಾತ ನೀತಿ - ೧೧೮ ಪದ್ಯಗಳು

ಐದನೆಯ ಸಂಧಿ : ಸಂಜಯನು ಕೃಷ್ಣಪಾಂಡವರು ಹೇಳಿದ ಮಾತುಗಳನ್ನು ಸಭೆಯಲ್ಲಿ ತಿಳಿಸಲು ಕರ್ಣನು ಆತನನ್ನು ಜರೆಯುವುದು. - ೨೨ ಪದ್ಯಗಳು.

ಆರನೆಯ ಸಂಧಿ : ಕೃಷ್ಣನು ಸಂಧಾನ ಸಂಗ್ರಾಮಗಳಲ್ಲಿ ಪಾಂಡವರಿಗೂ ದ್ರೌಪದಿಗೂ ಅಭಿಮತವಾವುದೆನ್ನುವುದನ್ನು ಪ್ರತ್ಯೇಕವಾಗಿ ಕೇಳಿ ತಿಳಿಯುವುದು. - ೩೦ ಪದ್ಯಗಳು

ಏಳನೆಯ ಸಂಧಿ : ಕೃಷ್ಣನು ಸಂಧಾನಕ್ಕಾಗಿ ಹಸ್ತಿನಾಪುರಕ್ಕೆ ಬರುವುದು - ೩೧ಪದ್ಯಗಳು

ಎಂಟನೆಯ ಸಂಧಿ : ಪಾಂಡವ ರಾಯಭಾರಿಯಾದ ಕೃಷ್ಣನು ಕೌರವನ ಆಸ್ಥಾನಕ್ಕೆ ಬರುವುದು - ೭೮ ಪದ್ಯಗಳು

ಒಂಭತ್ತನೆಯ ಸಂಧಿ : ಕೃಷ್ಣಸಂಧಾನ ಮತ್ತು ವಿಶ್ವರೂಪದರ್ಶನ - ೮೧ ಪದ್ಯಗಳು

ಹತ್ತನೆಯ ಸಂಧಿ : ಕೃಷ್ಣನು ಕರ್ಣನಿಗೆ ರಹಸ್ಯವಾಗಿ ಆತನ ಜನ್ಮ ವೃತ್ತಾಂತವನ್ನು ತಿಳಿಸುವುದು ಮತ್ತು ಕುಂತಿಯು ಕರ್ಣನನ್ನು ಕಾಣಲು ಹೋಗುವುದು - ೩೬ ಪದ್ಯಗಳು

ಹನ್ನೊಂದನೆಯ ಸಂಧಿ : ದ್ರುಪದನಿಗೆ ಸೇನಾಧಿಪತಿ ಪಟ್ಟವನ್ನು ಕಟ್ಟುವುದು ಮತ್ತು ಪಾಂಡವರ ಸೇನೆ ಕುರುಕ್ಷೇತ್ರದಲ್ಲಿ ಬೀಡು ಬಿಡುವುದು - ೪೯ ಪದ್ಯಗಳು

ಒಟ್ಟು ಹನ್ನೊಂದು ಪರ್ವಗಳು ೬೪೯ ಪದ್ಯಗಳಿವೆ.

ಅಂತ್ಯದಲ್ಲಿ ಪರಿಶಿಷ್ಟ ಒಂದರಲ್ಲಿ ಉದ್ಯೋಗಪರ್ವದಲ್ಲಿ ಎಲ್ಲಾ ಪ್ರತಿಗಳಲ್ಲಿಯೂ ಇಲ್ಲದ ಮೂಲಗ್ರಂಥಕ್ಕೆ ಸೇರಿದ ಹೆಚ್ಚಿನ ಪದ್ಯಗಳನ್ನು, ಪರಿಶಿಷ್ಟ ಎರಡರಲ್ಲಿ ಭಾರತ ನಿಘಂಟುವನ್ನು, ಭಾರತದ ನಿಘಂಟಿನ ಪದಗಳನ್ನು ಅಕಾರಾದಿಯಾಗಿರುವುದನ್ನು ಎಸ್.ಎನ್. ಕೃಷ್ಣಜೋಯಿಸ್‌ರವರ ಉದ್ಯೋಗಪರ್ವದ.ಆವೃತ್ತಿಯಲ್ಲಿ ಕಾಣಬಹುದು.

* * * * *

೩) "ಕುಮಾರವ್ಯಾಸ ಮಹಾಕವಿಯ ಕರ್ಣಾಟ ಭಾರತ ಕಥಾಮಂಜರಿ"ಯನ್ನು ಸಂಪಾದಕರಾದ 'ಮಾಸ್ತಿ ವೆಂಕಟೇಶ್ ಅಯ್ಯಂಗಾರ್ ಮತ್ತು ಕುವೆಂಪು'ರವರು ೧೯೫೮ರಲ್ಲಿ ಪ್ರಸಾರಂಗ, ಮೈಸೂರಿನಿಂದ ಪ್ರಕಟಿಸಿ ವಿನಂತಿಯಲ್ಲಿ ಈ ಕೆಲವು ವಿಷಯವನ್ನು ಚರ್ಚಿಸುತ್ತಾರೆ.

ವಿನಂತಿಯಲ್ಲಿ ಈ ಮಹಾಕಾವ್ಯ ಸಂಪಾದನ ಕಾರ್ಯಕ್ಕೆ ಕಾರಣ. ಅಂದರೆ ಅಂದಿನ ಮುಖ್ಯಮಂತ್ರಿಯಾಗಿದ್ದ ಶ್ರೀ ಕೆ. ಹನುಮಂತಯ್ಯನವರ ಸೂಚನೆಯಂತೆ ಓದುಗನಿಗೆ ಸುಲಭ ಬೆಲೆಯಲ್ಲಿ ಸುಂದರವಾಗಿ ಮುದ್ರಿಸಿ ಸಾಮಾನ್ಯನಿಗೆ ದೊರೆಯುವಂತೆ ಮಾಡುವ ಅಂಶವನ್ನು ವ್ಯಕ್ತಪಡಿಸುತ್ತಾರೆ.

- ೧೯೫೮ರ ಮೊದಲ ಮುದ್ರಣ ಬಹುಬೇಗ ಮುಗಿದು ಹೋಗಿದ್ದರಿಂದ ಮತ್ತೊಮ್ಮೆ ಪುನಃ ಮುದ್ರಿಸಲಾಯಿತು.
- ಮುದ್ರಣ ಸ್ಖಾಲಿತ್ಯಗಳ ಕಡೆಗೆ ಗಮನ ಕೊಟ್ಟಿರುವುದರ ಹೊರತು ಬೇರೆ ಯಾವ ಬದಲಾವಣೆಯನ್ನು ಮಾಡಿಲ್ಲ.
- ವಾಚಕರ ಸೌಲಭ್ಯಕ್ಕಾಗಿ ಕೆಲವು ಸಂಧಿಗಳಲ್ಲಿ ಪದ್ಯ ಸಂಖ್ಯೆಗಳನ್ನು ಹಾಕಲಾಗಿದ್ದು ವ್ಯತ್ಯಾಸವನ್ನು ಸರಿಪಡಿಸಲಾಯಿತು.

೭ ರೂಪಾಯಿಗಳಿಗೆ ೧೯೭೪ರಲ್ಲಿ ಎರಡನೆ ಮುದ್ರಣ ಮಾಡಲಾಯಿತು. ಪ್ರತಿಗಳು ಸಂಪೂರ್ಣವಾಗಿ ಮುಗಿದು ಹೋಗಿದ್ದು ಕಾಗದ ಬೆಲೆ ಮತ್ತು ಮುದ್ರಣದ ವೆಚ್ಚಗಳಲ್ಲಾಗಿರುವ ಏರಿಕೆಯಿಂದ ಹೊಸ ಆವೃತ್ತಿಯನ್ನು ೧೯೮೮ರಲ್ಲಿ ೩೦ರೂಪಾಯಿಗಳಿಗೆ ಮೂರನೇ ಮುದ್ರಣ ಮಾಡಲಾಯಿತು.

**"ತೋರಣ ನಾಂದಿ"**

ಒಂದು ಸಾವಿರ ವರ್ಷಗಳಿಂದ ಬೆಳೆದು ಬಂದಿರುವ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಮೂರು ಪ್ರಬಲವಾದ ಪರಿವರ್ತನ ಘಟ್ಟಗಳನ್ನು ಗುರುತಿಸಬಹುದು.

**ಒಂದನೆಯದು :** ೧೦ನೇ ಶತಮಾನದಲ್ಲಿ ಜೈನಧರ್ಮರೂಪದಿಂದ ಆವಿರ್ಭೂತವಾದದ್ದು ಪಂಪ ಕೃತಿಯಿಂದ,

**ಎರಡನೆಯದು :** ೧೨ನೇ ಶತಮಾನದಲ್ಲಿ ವೀರಶೈವ ಧರ್ಮರೂಪದಿಂದ ಹರಿಹರ ರಾಘವಾಂಕನಿಂದ,

**ಮೂರನೆಯದು :** ೧೫ನೇ ಶತಮಾನದಲ್ಲಿ ವೈಷ್ಣವ ಭಕ್ತಿರೂಪದಲ್ಲಿ ಕುಮಾರವ್ಯಾಸ (ನಾರಣಪ್ಪ)ನಿಂದ

**ನಾಲ್ಕನೆಯದು :** ೧೯-೨೦ನೇ ಶತಮಾನದ್ದು.

ಕನ್ನಡ ಕಾವ್ಯ ದೃಷ್ಟಿಯ ಕಾಮನ ಬಿಲ್ಲಿನಲ್ಲಿ ನಾರಣಪ್ಪನ ನೆಲೆ ನಟ್ಟನಡು, ನೆತ್ತಿ ಮುಡಿ, ಹಳೆಯ ಹೊಸಕನ್ನಡದ ತಲೆಯು ಕಿರೀಟ ಗಮಕ ಶಿರೋಮಣಿಗಳಿಂದ, ನಾಡುನಾಡೆ ಮೊಳಗಿ ರೋಮಾಂಚನಗೊಳ್ಳುವಂತೆ ರಸವನ್ನು, ಇಂಪನ್ನು, ಲಯವನ್ನು ತಾಳವನ್ನು ಛಂದಸ್ಸಿನ ಕುಣಿತವನ್ನು ಲೀಲಾಜಾಲವಾಗಿ ಹೊಮ್ಮಿಸಿ ಹರಿಯಿಸಿದ ಮಾಟಗಾರ ಕುಮಾರವ್ಯಾಸ.

ಈತ ಹೊಸ ಮಾರ್ಗಕ್ಕೆ ಹೊಸ ಶಕ್ತಿಗೆ ದಿಕ್ಸೂಚಿ, ಧ್ರುವತಾರೆ ವೀರನಾರಾಯಣನ ಪ್ರೇಮಕಿಂಕರ.

ಮಹತ್ತಿನೊಡನೆ ಜನಪ್ರಿಯತೆಯನ್ನು ಪಡೆದಿರುವ ವಿರಳ ಸುಯೋಗವುಳ್ಳ ಕವಿಗಳಲ್ಲಿ ಈತ ಗಣ್ಯ. ಕಲಿಯದವರಿಗೂ ಕಾಮಧೇನು, ಕನ್ನಡ ನಾಡಿನ ಜನಜೀವನದ ಹೃದಯ ವೇದಿಕೆಯಲ್ಲಿ ಅಗ್ರಸ್ಥಾನಸ್ಥ ಮಹಾಧ್ಯಕ್ಷನಾಗಿದ್ದಾನೆ.

ಕಾವ್ಯಕ್ಕೆ ಗುರು, ಕವಿ ತಾನು ಲಿಪಿಗಾರ ಎಂದು ದರ್ಶನ ಪ್ರತಿಭೆಗೆ ತನ್ನನ್ನು ತಾನು ಲಿಪಿಗಾರನನ್ನಾಗಿ ಮಾಡಿಕೊಂಡಿದ್ದಾನೆ.

ಕುಮಾರವ್ಯಾಸನು ಹಾಡಿದನೆಂದರೆ
ಕಲಿಯುಗ ದ್ವಾಪರವಾಗುವುದು
ಭಾರತ ಕಣ್ಣಲ್ಲಿ ಕುಣಿಯುವುದು; ಮೈಯಲಿ
ಮಿಂಚಿನ ಹೊಳೆ ತುಳುಕಾಡುವುದು।

ಕುಮಾರವ್ಯಾಸ ವಿಶಿಷ್ಟ ಶಕ್ತಿಯ ಸ್ವತಂತ್ರ ಕವಿ. ಪಂಪನಿಗೆ ಭಾರತ ಲೌಕಿಕ ಕಾವ್ಯವಾಯಿತು. ಕುಮಾರವ್ಯಾಸನಿಗೆ ಭಗವದ್ವಿಲಾಸ ಭೂಮಿಕೆಯಾಯಿತು.

ಪಂಪನಿಗೆ ಕಾವ್ಯ ಪ್ರತಿಭೆಯ ಪ್ರಕಾಶನದ ಒಂದು ಪ್ರಕಾರವಾಯಿತು. ಕುಮಾರವ್ಯಾಸನಿಗೆ ಆತ್ಮ ಪ್ರಕಾಶನದ ಏಕೈಕ ಪ್ರಕಾರವಾಯಿತು. ಕುಮಾರವ್ಯಾಸ ತನ್ನ ಸಮಗ್ರ ವ್ಯಕ್ತಿತ್ವದ ಅಖಂಡ ಸ್ವರೂಪವನ್ನು ಅವನು ಪ್ರತಿಮಿಸುವುದು ಸಾಧ್ಯವಾಯಿತು. ಈ ದೃಷ್ಟಿಯಿಂದ ಅದ್ವಿತೀಯ - ಭಾಮಿನಿಷಟ್ಪದಿಕಾರ 'ರೂಪಕ ಸಾಮ್ರಾಜ್ಯ ಚಕ್ರವರ್ತಿ'.

Wisdom Speaks first in images W.B.Yeats ಇವರ ಮಾತು ಇಲ್ಲಿ ಮುಖ್ಯ.

ಕುಮಾರವ್ಯಾಸನ ಕಾವ್ಯದಲ್ಲಿ ಅಡಗಿರುವ ಬಿರುನುಡಿ, ಕಿರಿನುಡಿ, ವ್ಯಂಗ್ಯ, ಹಾಸ್ಯ, ಸರಸ, ವಕ್ರೋಕ್ತಿ, ಜಾಣ್ನುಡಿ, ಎಲ್ಲವೂ ಅವನ ಬತ್ತಳಿಕೆಯಲ್ಲಿ ಹೇರಳವಾಗಿದೆ. ರೂಪಕಗಳು ಅಧಿಕವಾಗಿದ್ದು ಅವುಗಳನ್ನು ಸಂಪಾದಕರು ತೋರಣನಾಂದಿಯಲ್ಲಿ ಉದಾಹರಿಸುತ್ತಾರೆ.

---

ಕುವೆಂಪು ಮತ್ತು ಮಾಸ್ತಿ ವೆಂಕಟೇಶ ಅಯ್ಯಂಗಾರ್ ಸಂಪಾದನೆಯ ಕರ್ಣಾಟ ಭಾರತ ಕಥಾ ಮಂಜರಿಯ ತೋರಣ ನಾಂದಿಯಲ್ಲಿ ೭ನೆಯ ಪುಟದಲ್ಲಿದೆ (ಕುವೆಂಪು ಅವರು ಕುಮಾರವ್ಯಾಸನ ಬಗ್ಗೆ ಹೇಳಿರುವ ಪದ್ಯ).

ಕುಮಾರವ್ಯಾಸನ ಭೀಮ, ದ್ರೌಪದಿ, ಅಭಿಮನ್ಯು, ಉತ್ತರ, ಕರ್ಣ, ಅರ್ಜುನ, ಕೃಷ್ಣ, ಭೀಷ್ಮ, ದ್ರೋಣ, ವಿದುರ, ಕೌರವರ ಪಾತ್ರಗಳು ಕುಮಾರವ್ಯಾಸನಲ್ಲಿ ಅದ್ಭುತ ಶಕ್ತಿಯಾಗಿ ಸಂಚರಿಸುತ್ತವೆ. ಜಿಗುಟಿದರೆ ರಕ್ತಸೋರುವ ಮಟ್ಟಿಗೆ ಪಾತ್ರಗಳು ತುಂಬುಜೀವಿಯಾಗಿವೆ. ಇದಕ್ಕೆ ಅನುಗುಣವಾಗಿ ಸಂಯಮವೂ ಇದ್ದಿದ್ದರೆ ಪ್ರಪಂಚದ ಸಾಹಿತ್ಯದಲ್ಲಿ ನಮ್ಮ ಕವಿ ಅದ್ವಿತೀಯನಾಗುತ್ತಿದ್ದ ಆದರೆ ಈ ಸಂಯಮ ಪಂಪನಲ್ಲಿದೆ. ನಾರಣಪ್ಪನ ಪ್ರತಿಭೆಯ ಗಂಗೆ ಕರ್ಣನ ಕರುಣಾಪೂರ್ಣಕಲಶಗಳು ಅಕ್ಷಯಕಲಶವನ್ನು ಸದಾ ತುಂಬುತ್ತಿರುತ್ತದೆ. ಕರ್ಣ ಸುಯೋಧನರ ಸ್ನೇಹ ಸಂಬಂಧದ ಮಹಾಭಾರತವೆಲ್ಲವನ್ನು ವ್ಯಾಪಿಸಿ ಆವರಿಸಿರುವುದನ್ನು ಸಂಪಾದಕರು ಇಲ್ಲಿ ಚರ್ಚಿಸಿದ್ದಾರೆ.

ಕುಮಾರವ್ಯಾಸನ ಹಿರಿಮೆಯನ್ನು ಸಂಪಾದಕರ ಮಾತುಗಳಲ್ಲಿಯೇ ಹೇಳುವುದಾದರೆ, ''ನಮ್ಮ ಕನ್ನಡನಾಡಿಗೆ ದೇವರು ಸಹ್ಯಾದ್ರಿಯನ್ನು ದಯಪಾಲಿಸಿದ್ದಾನೆ. ತುಂಗಾ ಕಾವೇರಿಯನ್ನು ದಯಪಾಲಿಸಿದ್ದಾನೆ, ಪಶ್ಚಿಮ ಸಮುದ್ರದ ಸಂಗ ಸಾನ್ನಿಧ್ಯಗಳನ್ನು ಕೃಪೆಮಾಡಿದ್ದಾನೆ. ಜೊತೆಗೆ ಅವೆಲ್ಲಕ್ಕೂ ಹೆಗೆಲೆಣೆಯಾಗಿ ನಿಂತರೂ ನಮಗೆ ಒಡನಾಡಿಗಳಾಗಿರುವಂತೆ ಪಂಪ-ನಾರಣಪ್ಪರನ್ನೂ ಅನುಗ್ರಹಿಸಿದ್ದಾನೆ. ಅವರ ಬೆಲೆಯರಿತು ಬಾಳು ಅರಳಲಿ. ಆ ವಿಶ್ವಕವಿಗಳಿಬ್ಬರನ್ನೂ ನಮ್ಮವರೆಂದು ಹೇಳಿಕೊಳ್ಳುವ ನಮ್ಮ ಹೆಮ್ಮೆಯು ನೆತ್ತಿ ಮುಗಿಲಿಗೆ ತಾಗುತ್ತಿರಲಿ'' ಎಂಬುದು ಔಚಿತ್ಯಪೂರ್ಣವಾಗಿದೆ.

ಮಾಸ್ತಿ ವೆಂಕಟೇಶಅಯ್ಯಂಗಾರ್ ಮತ್ತು ಕುವೆಂಪು ಅವರ ಗ್ರಂಥ ಸಂಪಾದನೆಯ ಬಗ್ಗೆ ಹೇಳುವುದಾದರೆ, ಜನಸಾಮಾನ್ಯರನ್ನು ದೃಷ್ಟಿಯಲ್ಲಿಟ್ಟುಕೊಂಡು ಸಂಪಾದಿಸಿದರು. ಆದ್ದರಿಂದ ಸಂಶೋಧನೆಗೆ ಗಮನ ನೀಡಿಲ್ಲ. ಎಲ್ಲೆಲ್ಲಿ ಸಾಧ್ಯವೋ ಅಲ್ಲಲ್ಲಿ ನಾಲ್ಕಾರು ಓಲೆಗಳನ್ನು ಗಮನಿಸಿದ್ದಾರೆ ಅವುಗಳೆಂದರೆ,

- ಕ. ೨೦೫ನೆಯ ಪ್ರತಿ
- ಎ. ೫೭ನೆಯ ಕಲ್ಲಚ್ಚಿನ ಪ್ರತಿ (ಇದು ೧೮೫೧ರಲ್ಲಿ ಮಂಗಳೂರಿನಲ್ಲಿ ಮುದ್ರಿತವಾದದ್ದು ಮೊದಲ ನಾಲ್ಕು ಪರ್ವಗಳು ಮಾತ್ರ ಇವೆ.)
- ಶ್ರೀ. ಟಿ.ಎನ್.ಕೃಷ್ಣಯ್ಯಶೆಟ್ಟರ ಮುದ್ರಿತ ಪ್ರತಿ,
- ಓರಿಯಂಟಲ್ ಲೈಬ್ರರಿಯ ಪ್ರಕಟಣೆಗಳನ್ನು ಆಧಾರವಾಗಿಟ್ಟುಕೊಂಡು ಸಂಪಾದಿಸಿದ್ದಾರೆ.

ಕುವೆಂಪು ಅವರು ತಮ್ಮ ಆವೃತ್ತಿಯನ್ನು ಸಮಷ್ಟಿರೂಪದ ಒಂದು ಸಹೃದಯದ ವಿಮರ್ಶೆ, ಕನ್ನಡ ನಾಡಿನ ಹಿರಿಯ ಲೇಖಕ ವಿಮರ್ಶಕರ ಬರವಣಿಗೆಗಳಿಂದ ಆಯ್ದುಕೋದ ತೋರಣನಾಂದಿಯಾಗಿದೆ ಎಂದಿದ್ದಾರೆ.

ಕುವೆಂಪು ಮತ್ತು ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರ ಸಂಪಾದನೆಯ ಕರ್ಣಾಟ ಭಾರತ ಕಥಾಮಂಜರಿಯ ಉದ್ಯೋಗಪರ್ವ ಒಳಗೊಂಡಿರುವ ಭಾಗಗಳು ಈ ಕೆಳಗಿನಂತಿವೆ.

ಮೊದಲನೆ ಸಂಧಿ : ಭಕ್ತಕುಟುಂಬಿ ಅರ್ಜುನನ ಸಾರಥಿಯಾಗುವುದು - ೪೫ ಪದ್ಯಗಳು

ಎರಡನೆಯ ಸಂಧಿ : ಶಲ್ಯನನ್ನು ಕೌರವ ಒಲಿಸಿಕೊಂಡುದು ಸಂಜಯನ ದೌತ್ಯ - ೪೮ ಪದ್ಯಗಳು

ಮೂರನೆಯ ಸಂಧಿ : ವಿದುರ ನೀತಿ - ೧೩೭ ಪದ್ಯಗಳು

ನಾಲ್ಕನೆಯ ಸಂಧಿ : ಸನತ್ಸುಜಾತ ನೀತಿ - ೧೨೨ ಪದ್ಯಗಳು

ಐದನೆಯ ಸಂಧಿ : ಕೃಷ್ಣಪಾಂಡವರು ಹೇಳಿದುದನ್ನು ಸಂಜಯ ಕೌರವರಿಗೆ ನಿರೂಪಿಸುತ್ತಾನೆ - ೨೨ಪದ್ಯಗಳು

ಆರನೆಯ ಸಂಧಿ : ಸಂಗ್ರಾಮಕ್ಕೆ ಪಾಂಡವರ ಮನಸ್ಸನ್ನು ಕೃಷ್ಣಹದಗೊಳಿಸಿದುದು - ೩೦ ಪದ್ಯಗಳು

ಏಳನೆಯ ಸಂಧಿ : ಕಾಳಗವನೇ ಒಲಿದುಬಹೆ ಎಂದು ದ್ರೌಪದಿಗೆ ವಚನವಿತ್ತು ಕೃಷ್ಣ ಹಸ್ತಿವಾವತಿಗೆ ನಡೆದುದು - ೩೧ ಪದ್ಯಗಳು

ಎಂಟನೆಯ ಸಂಧಿ : ಕೌರವನ ಒಡ್ಡೋಲಗಕ್ಕೆ ರಾಯಭಾರಿ ಅಸುರಾರಿ ಕೃಷ್ಣ ನಡೆತರುತ್ತಾನೆ - ೭೨ ಪದ್ಯಗಳು.

ಒಂಬತ್ತನೆಯ ಸಂಧಿ : ಬಿಡುನೆಲನ ಕೇಡಿಗರ ಮಾತಿಂಗೊಂಡಬಡದಿರು ಎಂದು ಜರೆದ ಕೃಷ್ಣನನ್ನು ಕೌರವ ಕಟ್ಟಲು ಮಾಡುವ ಸಾಹಸ, ವಿಶ್ವರೂಪದರ್ಶನ - ೮೦ ಪದ್ಯಗಳು

ಹತ್ತನೆಯ ಸಂಧಿ : ಕರ್ಣಬೇದನ - ೩೫ ಪದ್ಯಗಳು

ಹನ್ನೊಂದನೆಯ ಸಂಧಿ : ಧೃಷ್ಟದ್ಯುಮ್ನನು ಸೇನಾಧಿಪತಿಯಾಗುತ್ತಾನೆ - ೪೯ ಪದ್ಯಗಳು

ಒಟ್ಟು ಹನ್ನೊಂದು ಸಂಧಿಯ ೬೭೧ ಪದ್ಯಗಳನ್ನು ಒಳಗೊಂಡಿದೆ.

* * * * *

೪) "ಮಹಾಭಾರತ ಸಂಗ್ರಹ" (ಹೊಸ ಗನ್ನಡ ಗದ್ಯಾನುವಾದ)ವನ್ನು 'ದೇವುಡು ನರಸಿಂಹ ಶಾಸ್ತ್ರಿ'ಯವರು ೧೯೫೮ರಲ್ಲಿ ಶ್ರೀ ಗೀರ್ವಾಣ ವಿದ್ಯಾಪೀಠ ಪ್ರಕಾಶನದಿಂದ ಪ್ರಕಟಿಸಿದರು.

ಭಾರತೀಯರಿಗೆ ಮಹಾಭಾರತ ಒಂದು ವಿಶ್ವಕೋಶದಂತೆ, ಜನರ ಮನಸ್ಸಿನಲ್ಲಿ ಇರಬೇಕಾದ ವಿಷಯವೆಲ್ಲ ಮಹಾಭಾರತದಲ್ಲಿದೆ. ಹಿಂದೂ ಧರ್ಮದಲ್ಲಿ ತತ್ವಗಳಿಗಿಂತ ಸಂದೇಹಗಳೇ ಹೆಚ್ಚು. ಅಂತಹ ಸಂದೇಹಗಳನ್ನು ನಿವಾರಿಸಿಕೊಳ್ಳಲು ಮಹಾಭಾರತ ನೆರವಾಗುತ್ತದೆ. ಜನತೆಗೆ ಸಂದೇಹವನ್ನು ನಿವಾರಿಸಿಕೊಳ್ಳಲು ಅನುಕೂಲವಾಗಲಿ ಎಂಬ ಉದ್ದೇಶದಿಂದ. ದೇವುಡು ಅವರು ಮಹಾಭಾರತದ ಮೂರು ಪರ್ವಗಳಾದ ಅರಣ್ಯಪರ್ವ, ವಿರಾಟಪರ್ವ ಮತ್ತು ಉದ್ಯೋಗಪರ್ವವನ್ನು ಹೊಸಗನ್ನಡಕ್ಕೆ ಗದ್ಯಾನುವಾದ ಮಾಡಿದ್ದಾರೆ.

ಓದುಗನಿಗೆ ಸುಲಭವಾಗಿ ಅರ್ಥವಾಗುವಂತೆ ಕುಮಾರವ್ಯಾಸನ ಉದ್ಯೋಗಪರ್ವದ ಪದ್ಯಗಳನ್ನು ಗದ್ಯರೂಪದಲ್ಲಿ ರಚಿಸಿದ್ದಾರೆ. ದೇವುಡು ಅವರ ಗದ್ಯಾನುವಾದದ ಉದ್ಯೋಗಪರ್ವ ಒಳಗೊಂಡಿರುವ ಶೀರ್ಷಿಕೆಗಳು

೧. ಸೇನಾ ಸಂಗ್ರಹ.

೨. ಇಂದ್ರೋಪಾಖ್ಯಾನ

೩. ದೂತರು ಹೋಗಿ ಬಂದದ್ದು

೪. ಪಾಂಡವರ ಸಂದೇಶ

೫. ದುರ್ಯೋಧನನ ಉತ್ತರ

೬. ಶ್ರೀಕೃಷ್ಣನು ಸಂಧಿಗೆ ಹೋದುದು

೭. ಶ್ರೀಕೃಷ್ಣನು ಹಸ್ತಿನಾವತಿಗೆ ಬಂದದ್ದು

೮. ಕೌರವರಾಜ ಸಭೆ

೯. ವಿಶ್ವರೂಪ

೧೦. ಕುಂತೀಕರ್ಣರ ಕಥೆ

೧೧. ಸೇನಾಪತಿಗಳನ್ನು ಆರಿಸಿದುದು

೧೨. ಅಂಬೋಪಾಖ್ಯಾನ

* * * * *

೨) "ಕುಮಾರವ್ಯಾಸ ಸರಸವಾಣಿ"ಯನ್ನು 'ಡಿ.ವಿ.ಶೇಷಗಿರಿರಾವ್'ರವರು ೧೯೭೦ರಲ್ಲಿ ಪದ್ಮಾಂಬ ಪ್ರಿಂಟರ್ಸ್‌ನಿಂದ ಪ್ರಕಟಿಸಿದರು.

ಸಂಪಾದಕರು ಪೀಠಿಕೆಯಲ್ಲಿ ಕವಿಯ ಶ್ರೇಷ್ಠತೆ, ಕಾಲ, ಸ್ಥಳ, ಧರ್ಮ ವಿಶೇಷವಾದ ಆತ್ಮ ಪ್ರತ್ಯಯ, ಕೆಚ್ಚು, ಭಕ್ತಿ ಮುಂತಾದ ವಿಷಯಗಳನ್ನು ಚರ್ಚಿಸುತ್ತಾರೆ.

ಕನ್ನಡ ಭಾರತವನ್ನು ಮೊದಲು ಬರೆದ ಪಂಪನ ಶೈಲಿ, ಕಥಾನಿರೂಪಣಾ ವಿಧಾನ ಕಥಾನಾಯಕ. ಹಾಗೇ ಕುಮಾರವ್ಯಾಸನ ಶೈಲಿ ಕಥಾನಾಯಕ. ಇಬ್ಬರು ಕಾವ್ಯಗಳನ್ನು ನೋಡಿ ದೃಷ್ಟಿಗಳನ್ನು ಗಮನಿಸಿದರೆ ಪಂಪನ ಭಾರತ ಲೌಕಿಕವಾದರೆ, ನಾರಣಪ್ಪನ ಭಾರತ ಇಹಪರಗಳಲ್ಲಿ ಸುಖ ಸದ್ಗತಿಗಳನ್ನು ಕರುಣಿಸುವ ಪವಿತ್ರವಾದ ಪುಣ್ಯ ಚರಿತ್ರೆ. ಹೀಗೆ ಕುಮಾರವ್ಯಾಸನ ಶ್ರೇಷ್ಠತೆಯನ್ನು ವ್ಯಕ್ತಪಡಿಸುತ್ತಾರೆ. .ನಂತರ **ರಾಜಸೂಯ ದುರ್ವಾಸ ಆತಿತ್ಯ, ವೀರಕುಮಾರಉತ್ತರ, ಕೃಷ್ಣ ಸಂಧಾನ,** ಇವುಗಳನ್ನು ಅನುಗುಣವಾಗಿ **ಸಭಾಪರ್ವ, ಅರಣ್ಯಪರ್ವ, ವಿರಾಟಪರ್ವ** ಮತ್ತು ಉದ್ಯೋಗಪರ್ವದ ತಿರುಳನ್ನು ಸೂಕ್ಷ್ಮವಾಗಿ ತಿಳಿಸುವುದರೊಂದಿಗೆ ಕಾವ್ಯದ ರೀತಿ, ಶೈಲಿ, ರೂಪಕಗಳಿಗೆ ಉದಾಹರಣೆಗಳನ್ನು ನೀಡುತ್ತಾ ಕನ್ನಡ ಸಾಹಿತ್ಯದಲ್ಲಿ ಕುಮಾರವ್ಯಾಸನ ಸ್ಥಾನವನ್ನು ಪರಿಚಯಿಸುತ್ತಾರೆ.

ಇವರ ಕುಮಾರವ್ಯಾಸ ಸರಸವಾಣಿಯಲ್ಲಿ ಉದ್ಯೋಗಪರ್ವದಿಂದ ಆಯ್ದ ಪದ್ಯಗಳನ್ನು 'ಕೃಷ್ಣಸಂಧಾನ' ಎಂಬ ಶೀರ್ಷಿಕೆಯಲ್ಲಿ ಕಾಣಬಹುದು. ಈ ಕೃಷ್ಣಸಂಧಾನ ನಾಲ್ಕು ಭಾಗಗಳನ್ನು ಒಳಗೊಂಡು ಅವು ಕೆಳಗಿನಂತಿವೆ.

| | |
|---|---|
| ೧. ಸಂಧಿಯ ಮುರಿದು ಬಹೆವು | - ೩೨ ಪದ್ಯಗಳು |
| ೨. ಭಜಕಂಗೊಲಿದು ತಾನೈತಹುದು ಕರುಣ್ದನ ಘನತೆ | - ೨೬ ಪದ್ಯಗಳು |
| ೩. ರಾಯಭಾರವಧರಿಸಿ ಕೌರವನರ ಮನೆಗೆ ನಡೆ ತಂದ | - ೨೧ ಪದ್ಯಗಳು |
| ೪. ಕೇಡುಗರ ಮಾತಿಂಗೊಡಬಡಿದಿರು | - ೪೦ ಪದ್ಯಗಳು |

ಒಟ್ಟು ೧೧೯ ಪದ್ಯಗಳನ್ನು ಒಳಗೊಂಡಿದೆ.

ಕುಮಾರವ್ಯಾಸ ಸರಸವಾಣಿ ಅಂತ್ಯದಲ್ಲಿ ಕೆಲವು ವಿಷಯಗಳಿಗೆ ಟಿಪ್ಪಣಿಗಳನ್ನು, ಪದ್ಯ ಹಾಗೂ ಪುಟಗಳ ಸಂಖ್ಯೆಗೆ ಅನುಗುಣವಾಗಿ ಅರ್ಥಕೋಶ ಅಕಾರಾದಿಯಾಗಿರುವುದನ್ನು ಇವರ ಸಂಪಾದನೆಯಲ್ಲಿ ಕಾಣಬಹುದು.

* * * * *

೬) "ಕುಮಾರವ್ಯಾಸ ಭಾರತ" (ಗದುಗಿನ ಭಾರತದ ಗದ್ಯಾನುವಾದ)ವನ್ನು 'ಶ್ರೀ ಎನ್ಕೆ ಕುಲಕರ್ಣಿ'ಯುವರು ೧೯೭೧ರಲ್ಲಿ ಮನೋಹರ ಘಾಣೇಕರ ಸಮಾಜ ಪುಸ್ತಕಾಲಯದಿಂದ ಪ್ರಕಟಿಸಿದರು.

ಕನ್ನಡ ಸಾಹಿತ್ಯದಲ್ಲಿ ಎನ್ಕೆಯುವರ ಹೆಸರು ಚಿರಸ್ಥಾಯಿಯಾಗಿದೆ. ಕನ್ನಡಿಗರಿಗೆ ಚಿರಪರಿಚಿತರಾಗಿರುವ ಇವರು ನಾಟಕ, ಕಾದಂಬರಿ, ಹರಟೆ, ಲಘುಪ್ರಹಸನ ಮುಂತಾದ ಕ್ಷೇತ್ರದಲ್ಲಿ ಪ್ರಸಿದ್ಧರಾಗಿದ್ದಾರೆ. ಎನ್ಕೆಯವರು ಲಲಿತಸಾಹಿತ್ಯ, ವಿಚಾರ, ವಿಮರ್ಶ ಸಾಹಿತ್ಯದಲ್ಲಿ ಮಾಡಿರುವ ಕೃಷಿಗೆ ಅವರು ಪ್ರಕಟಿಸಿರುವ ಕನ್ನಡ ಸಾಹಿತ್ಯ ವಾಹಿನಿ ಸಾಕ್ಷಿಯಾಗಿದೆ.

ಪ್ರಾಚೀನ ಮಹಾಕಾವ್ಯಗಳನ್ನು ಮೂಲರೂಪದಲ್ಲಿಯೇ ಓದಿ ಅರ್ಥೈಸಿಕೊಳ್ಳಲು ನಮ್ಮ ಜನತೆಗೆ ವಿರಾಮವಿಲ್ಲದೆ ಇರುವ ಕಾರಣ ಅವುಗಳನ್ನು ಗದ್ಯಾನುವಾದ ಮಾಡಿದ್ದಾರೆ.

ಎನ್ಕೆಯವರು ಗದುಗಿನ ಭಾರತವನ್ನು ಅತ್ಯಂತ ಆಸ್ಥೆಯಿಂದ ಶ್ರದ್ಧೆಯಿಂದ ಕಲಿತವರು ಹಾಗೂ ಕುಮಾರವ್ಯಾಸನ ನೆಲೆಬೀಡಾದ ಗದುಗು. ಎನ್ಕೆಯವರ ಜನ್ಮಸ್ಥಳ ಕೂಡ. ಕುಮಾರವ್ಯಾಸ ಕಾವ್ಯವನ್ನೇ ಅವರು ಉಚ್ಚ ವ್ಯಾಸಂಗಕ್ಕೆ ತೆಗೆದುಕೊಂಡಿದ್ದು, ಕುಮಾರವ್ಯಾಸ ಭಾರತದಲ್ಲಿ ತನ್ಮಯರಾಗಿದ್ದಾರೆ. ತಣ್ಣನೆ ತಣಿದು ತೇಗಿದ್ದಾರೆ. ಹಾಗಾಗಿ ಕವಿ ಕೃತಿಯ ಸಾರವನ್ನು ಕನ್ನಡಿಗರಿಗೆ ನೀಡಿದ್ದಾರೆ. ಎನ್ಕೆಯವರು ಭಾಷೆಯ ಬೆಡಗು, ಶೈಲಿಯೊಂದಿಗೆ ೧೦ಪರ್ವದ ಮಹಾಕಾವ್ಯವನ್ನು ಓದುಗನಿಗೆ ಉಪಯುಕ್ತವಾಗುವ ರೀತಿಯಲ್ಲಿ ಗದ್ಯಾನುವಾದ ಮಾಡಿದ್ದಾರೆ.

ಭಕ್ತಕವಿಗಳಲ್ಲಿ ಅಗ್ರಗಣ್ಯನಾದ ಕುಮಾರವ್ಯಾಸನಿಗೆ ಮಹಾಭಾರತ ಕೃಷ್ಣಕಥೆ, ಆದ್ದರಿಂದಲೇ ವೀರನಾರಾಯಣನೆ ಕವಿ. ಕುಮಾರವ್ಯಾಸ ಲಿಪಿಕಾರಮಾತ್ರ. ಕವಿ ತನ್ನ ಕಾಲ, ಸ್ಥಳ, ಪೂರ್ವಿಕರು, ಕೃತಿ ಯಾವುದರ ಬಗ್ಗೆಯೂ ಹೇಳುವುದಿಲ್ಲ. ಹೀಗೆ ಸೂಕ್ಷ್ಮವಾಗಿ ಕುಮಾರವ್ಯಾಸನ ಕೃತಿ, ಶೈಲಿ, ಸೊಬಗು, ಶ್ರೇಷ್ಠತೆಯನ್ನು ತಿಳಿಸುತ್ತಾರೆ.

ಗದುಗಿನ ಭಾರತದ ಹತ್ತು ಪರ್ವಗಳನ್ನು ಆದಿಪರ್ವದಿಂದ ಗದಾಪರ್ವದವರೆಗೂ ಕಥಾಸಾರವನ್ನು ಹೇಳುತ್ತಾರೆ. ಉದ್ಯೋಗಪರ್ವಕ್ಕೆ ಯಾವುದೇ ಶೀರ್ಷಿಕೆಯನ್ನು ನೀಡಿಲ್ಲ.

ಎನ್ಕೆಯವರು ಕುಮಾರವ್ಯಾಸ ಹೇಳಿದಂತೆ ಬರೆದವರು ಎಂಬ ವಾಕ್ಯ ಉದ್ಯೋಗ ಪರ್ವದ ಗದ್ಯಾನುವಾದಕ್ಕೆ ಕನ್ನಡಿ ಹಿಡಿದಂತಾಗಿದೆ.

ತಮ್ಮ ಕೃತಿಯ ಅಂತ್ಯದಲ್ಲಿ ಶಬ್ಧಕೋಶ ವಿಭಾಗದಲ್ಲಿ ಕುಮಾರವ್ಯಾಸ ನಿಘಂಟು ಎಂದು ಅಕಾರಾಧಿಯಾಗಿ ಪದಗಳ ಅರ್ಥವನ್ನು ನೀಡಿದ್ದಾರೆ.

* * * * *

೬) <u>"ಕುಮಾರವ್ಯಾಸಭಾರತ"(ಕಾವ್ಯಸಂಗ್ರಹ)</u>ವನ್ನು 'ತ.ಸು. ಶಾಮರಾಯ'ರವರು ೧೯೭೨ರಲ್ಲಿ ಸಾಹಿತ್ಯ ಅಕಾಡೆಮಿ, ಹೊಸದೆಹಲಿ ಸಮಾಜ ಪುಸ್ತಕಾಲಯದಿಂದ ಪ್ರಕಟಿಸಿದರು.

ಗದುಗಿನ ಭಾರತವನ್ನು ಹಾಡದಹಳ್ಳಿಗಳಿಲ್ಲ, ಕೇಳದ ಕನ್ನಡಿಗನಿಲ್ಲ, ಸಾಮಾನ್ಯನಿಂದ ಪಾಮರರವರೆಗೆ, ಅಂಗಡಿಯಿಂದ ಅರಮನೆಯವರೆಗೆ, ನಾರಣಪ್ಪನ ಕೀರ್ತಿ ಹಬ್ಬಿದೆ. ಕನ್ನಡ ಕವಿಗಳಲ್ಲಿ ಜನಪ್ರಿಯನಾದ ಕುಮಾರವ್ಯಾಸನ ಕಾಲ, ಸ್ಥಳ, ಕೃತಿ, ಅಂಕಿತ, ಆರಾಧ್ಯ ದೈವ, ಮುಂತಾದವುಗಳನ್ನು ಸಂಪಾದಕರು ಪ್ರಸ್ತಾಪಿಸಿದ್ದಾರೆ.

ಪಂಪ ಮತ್ತು ಕುಮಾರವ್ಯಾಸರ ಭಾರತಗಳಲ್ಲಿನ ವಿಶೇಷತೆಗಳನ್ನು ತಿಳಿಸುತ್ತಾ ಕುಮಾರವ್ಯಾಸನ ಶ್ರೇಷ್ಠತೆಯನ್ನು, ಶೈಲಿಯನ್ನು ಕಾವ್ಯದ ಸೊಬಗು ಅಲಂಕಾರಗಳನ್ನು ಉದಾಹರಣೆಗಳೊಂದಿಗೆ ನಿದರ್ಶಿಸುತ್ತಾರೆ.

ಬಿ.ಎಂ. ಶ್ರೀಕಂಠಯ್ಯನವರ ಪ್ರಕಾರ ನಮ್ಮ ಕುಮಾರವ್ಯಾಸ ಹಿರಿಯ ತಲೆ, ಹಿರಿಯರಲ್ಲಿ ಹಿರಿಯ. ಕನ್ನಡ ಸಾಹಿತ್ಯದ ಉತ್ತಮರತ್ನಗಳಲ್ಲಿ ನಾಯಕ ರತ್ನ ಎಂದಿದ್ದಾರೆ.

ತ.ಸು.ಶಾಮರಾಯರ ಪ್ರಕಾರ ಕುಮಾರವ್ಯಾಸನ ಭಾರತ ಬಾಂದಳದ ಸೂರ್ಯನಾದರೆ ನಂತರ ಬಂದ ಭಾರತಗಳು ಸೂರ್ಯನ ಮುಂದಿನ ಸೊಡರುಗಳು ಎಂದಿದ್ದಾರೆ. ಈ ಅಂಶಗಳನ್ನು ಮುನ್ನುಡಿಯಲ್ಲಿ ಕಾಣಬಹುದು.

ತ.ಸು.ಶಾಮರಾಯರ ಆವೃತ್ತಿಯು, ನಾಂದಿ, ಭಾರತ ವರಕಥಾಮೃತ, ಕಥಾಮುಖ, ಜನಿಸಿದನು ಕಲಿಕರ್ಣ ಹೀಗೆ ಹಲವಾರು ಬಿಡಿ-ಬಿಡಿ ಭಾಗಗಳನ್ನು ಒಳಗೊಂಡಿದೆ. ಇಂತಹ ಬಿಡಿಭಾಗಗಳಲ್ಲಿಯೇ ಉದ್ಯೋಗಪರ್ವವನ್ನು ಗುರುತಿಸಬಹುದು.

| | |
|---|---|
| ೧. ಅಭಿಮನ್ಯುವಿನ ವೈವಾಹ | - ೫ ಪದ್ಯಗಳು |
| ೨. ಕಿರೀಟಿಯ ಮನೆಯ ಬಂಡಿಯ ಬೋವನಾದನು | - ೨೪ ಪದ್ಯಗಳು |
| ೩. ಕಾಳಗವನೇ ಬಲಿದು ಬಹೆನು | - ೨೮ ಪದ್ಯಗಳು |
| ೪. ಮುರಿದುದು ಸಂಧಿ | - ೫೧ ಪದ್ಯಗಳು |
| ೫. ಬೇದದೊಳು ಕುರುಕುಲವ ಕೊಂದನು · | - ೩೬ ಪದ್ಯಗಳು |
| ೬. ನಡೆದು ಬಂದುದು ಪಡೆ ಕುರುಕ್ಷೇತ್ರಕ್ಕೆ | - ೮ ಪದ್ಯಗಳು |

ಒಟ್ಟು ೧೫೨ ಪದ್ಯಗಳಿವೆ.

ಕೊನೆಯಲ್ಲಿ ಪದ್ಯಸಂಖ್ಯೆ ಪುಟಸಂಖ್ಯೆಗೆ ಅನುಗುಣವಾಗಿ ಅಕಾರಾದಿಯಾಗಿ ಅರ್ಥಗಳನ್ನು ಶಬ್ದಕೋಶ ಒಳಗೊಂಡಿವೆ.

* * * * *

೮) "ಕುಮಾರವ್ಯಾಸ ಮಹಾಕವಿಯ ಕರ್ಣಾಟಕ ಭಾರತ ಕಥಾಮಂಜರಿ" (ಗದ್ಯಾನುವಾದ) 'ಎಲ್. ಗುಂಡಪ್ಪ'ನವರು ೧೯೭೬ರಲ್ಲಿ ಹೇಮಂತ ಸಾಹಿತ್ಯದಿಂದ ಪ್ರಕಟಿಸಿದರು.

ನಡುಗನ್ನಡದ ತಿಳಿಯ ಭಾಷೆಯ ಕುಮಾರವ್ಯಾಸನ ಭಾರತವನ್ನು ಸಾಮಾನ್ಯರಿಗೆ, ಗ್ರಂಥಾಸಕ್ತರಿಗೆ ಗದ್ಯಾನುವಾದ ಹೆಚ್ಚು ಉಪಯುಕ್ತವಾಗಲಿ ಎಂಬ ಉದ್ದೇಶದಿಂದ ಎಲ್.ಗುಂಡಪ್ಪನವರು ಕುಮಾರವ್ಯಾಸ ಭಾರತವನ್ನು ಗದ್ಯಾನುವಾದ ಮಾಡಿದ್ದಾರೆ.

ಇವರ ಉದ್ಯೋಗಪರ್ವ ಒಳಗೊಂಡಿರುವ ವಿವಿಧ ಶೀರ್ಷಿಕೆಗಳು ಈ ಕೆಳಗಿನಂತಿವೆ.

೧. ಸಾರಥಿಯಾದನರ್ಜುನಗೆ ಮುರವೈರಿ

೨. ಬಂದು ಕಂಡನು ಸಂಜಯನು

೩. ತಿಳುಹಿದನು ವಿದುರನು ನಯನೀತಿ ಧರ್ಮಂಗಳನು

೪. ಅಮಳ ಬ್ರಹ್ಮವಿದ್ಯೆಯನನುಕರಿಸಿ ಇರುಳ ನೂಕಿದನು

೫. ಕುರುಭೂಪಾಲ ನೆರಹಿದನು ಸಚ್ಚರನಾಪ್ತ ಮಂತ್ರಿಗಳ

೬. ಶೌರ ಸಮೀರಸುತನಲಿ ಸಮತೆಯನು ಸೇರಿಸಿದನು

೭. ಶರಣಜನ ಸುರಧೇನು ಹೊಕ್ಕನು ಹಸ್ತಿನಾಪುರವ

೮. ರಾಯಭಾರವ ಧರಿಸಿ ಕೌರವನರಮನೆಗೆ ನಡೆತಂದನಸುರಾರಿ

೯. ಅಸುರರಿಪು ಕೌರವನ ಜರೆದ

೧೦. ಉದ್ದಂಡ ಕೌರವನ ಕಂಡಳಾ ಕುಂತಿ

೧೧. ಪಾಂಡವರು ಕರ್ಣನೊಳು ವೆಂಠಣಿಸಿದರು

* * * * *

೬) "ಕುಮಾರವ್ಯಾಸ ಭಾರತ ಸಂಗ್ರಹ"ವನ್ನು 'ಎಂ.ವಿ.ಸೀತಾರಾಮಯ್ಯ'ನವರು ೧೯೫೦ರಲ್ಲಿ ಬಿ.ಎಂ.ಶ್ರೀ. ಪ್ರತಿಷ್ಠಾನದಿಂದ ಪ್ರಕಟಿಸಿದರು.

ಯಾವ ಸಾಹಿತ್ಯವಾದರೂ ತನ್ನವನೆಂದು ಹೇಳಿಕೊಳ್ಳುವ ಉಜ್ವಲ ಪ್ರತಿಭೆಯ ಕವಿ ಕುಮಾರವ್ಯಾಸ. ಇಂತಹ ಮಹಾಕವಿಯ ಮಹಾಕಾವ್ಯದ ಸಂಗ್ರಹವನ್ನು ಪ್ರಕಟಿಸುವ ಬಯಕೆ ಪ್ರೊ.ಎಂ.ವಿ. ಸೀತಾರಾಮಯ್ಯನವರದು. ಸುಮಾರು ಎರಡು ವರ್ಷಗಳ ಸತತ ಪರಿಶ್ರಮದ ಫಲ ಈ ಕೃತಿ. ಕುಮಾರವ್ಯಾಸ ಭಾರತ ಸಂಗ್ರಹಕ್ಕೆ ಆಚಾರ್ಯ ಬಿಂ.ಎಂ. ಶ್ರೀಕಂಠಯ್ಯ, ಪ್ರೊ. ಟಿ.ಎಸ್.ವೆಂಕಣ್ಣಯ್ಯ, ಪ್ರೊ. ಎಂ.ಆರ್. ಕೃಷ್ಣಶಾಸ್ತ್ರಿ, ಮತ್ತು ಪ್ರೊ.ಡಿ.ಎಲ್.ನರಸಿಂಹಚಾರ್ಯರ ನೆರವಿನಿಂದ ಸಿದ್ಧಗೊಳಿಸಿದ ಹಸ್ತಪ್ರತಿ ಒಂದು ಮುಖ್ಯ ಆಕರವಾಗಿದೆ. ಹೀಗೆ ಇವರಿಗೆ ನೆರವಾದ ಎಲ್ಲ ಹಿರಿಯರಿಗೂ ಕೃತಜ್ಞತೆ ಸಲ್ಲಿಸಿರುವುದನ್ನು ಮುನ್ನುಡಿಯಲ್ಲಿ ಕಾಣಬಹುದು.

ಉಪೋದ್ಘಾತದಲ್ಲಿ ಕವಿಚರಿತ್ರೆ, ಕವಿಯ ವೈಯಕ್ತಿಕ ಚರಿತ್ರೆ, ಕಾವ್ಯ ಸಮೀಕ್ಷೆ, ಸನ್ನಿವೇಶಗಳು, ರಸದೃಷ್ಟಿ, ವರ್ಣನೆಗಳು, ಪಾತ್ರರಚನೆ, ಪರಿಷ್ಕರಣಗಳು ಮತ್ತು ಪಾಠಪರಿಷ್ಕರಣಗಳನ್ನು ಚರ್ಚಿಸಿದ್ದಾರೆ.

ಕವಿಯ ಕಾಲವಿಚಾರ - ಕುಮಾರವ್ಯಾಸನ ಕಾವ್ಯದಲ್ಲಿ ಕಾಲದ ಬಗ್ಗೆ ತಿಳಿಯಲು ಆಧಾರಗಳಿಲ್ಲ. ಆದರೂ ಕುಮಾರವ್ಯಾಸನ ಕಾಲನಿರ್ಣಯಿಸಲು ಇರುವ ಪ್ರಮಾಣಗಳನ್ನು ಎಂ.ವಿ.ಸೀತಾರಾಮಯ್ಯನವರು ಈ ರೀತಿ ವಿಭಾಗಿಸಿದ್ದಾರೆ.

೧. ಕುಮಾರವ್ಯಾಸ ಭಾರತದಲ್ಲಿ ಪೂರ್ವಕವಿಗಳ ಅನುಸರಣೆ ಮತ್ತು ಗ್ರಂಥದ ಪ್ರಭಾವ

೨. ಶಾಸನ ಸಾಕ್ಷ್ಯಗಳು

೩. ವೀರಶೈವ ಗ್ರಂಥಗಳಲ್ಲಿ ಬಂದಿರುವ ಕವಿಯ ಚರಿತ್ರೆ

೪. ಗ್ರಂಥದ ಅಂತರ ಸಾಕ್ಷ್ಯಗಳು

೫. ಗ್ರಂಥದ ಭಾಷೆ ಶೈಲಿಗಳು

೬. ಕೋಳಿವಾಡದ ಕಾಗದ ಪತ್ರಗಳಲ್ಲಿ ಕವಿಯ ವಿಚಾರ.

ಸಂಪಾದಕರು ಈ ಎಲ್ಲಾ ಅಂಶಗಳನ್ನು ಸಾಕ್ಷಿ ಆಧಾರಗಳೊಂದಿಗೆ ವಿವರಿಸುತ್ತಾರೆ.

ಕವಿ ತನ್ನ ಕಾವ್ಯದ ಪೀಠಿಕಾ ಸಂಧಿಯಲ್ಲಿ ವೀರನಾರಾಯಣನೆ ಕವಿ ಲಿಪಿಕಾರ ಕುಮಾರವ್ಯಾಸ ಎಂದು ಹೇಳಿಕೊಳ್ಳುತ್ತಾನೆ.

ಕವಿಯ ನಿಜನಾಮ, ಕೃತಿಯ ಹಿರಿಮೆ, ಪಂಪನ ಭಾರತಕ್ಕೂ ಕುಮಾರವ್ಯಾಸ ಭಾರತಕ್ಕೂ ಇರುವ ಸ್ಥಾನ-ಮಾನ. ಕುಮಾರವ್ಯಾಸನ ನಾಯಕ. ಪಂಪನನಾಯಕ ಇಬ್ಬರ ದೃಷ್ಟಿಕೋನಗಳನ್ನು ಎಂ.ವಿ.ಸೀತಾರಾಮಯ್ಯನವರು ಚರ್ಚಿಸುತ್ತಾ ನಾರಣಪ್ಪನ ಬಗ್ಗೆ ವಿಸ್ತಾರವಾಗಿ ತಿಳಿಸುತ್ತಾರೆ.

ಕುಮಾರವ್ಯಾಸ ಭಾರತದ ಜನಪ್ರಿಯತೆಯ ಕಾರಣಗಳನ್ನು ಎಂ.ವಿ. ಸೀತಾರಾಮಯ್ಯನವರು ಹೀಗೆ ಗುರುತಿಸುತ್ತಾರೆ.

- ಹೆಚ್ಚು ಜನಪ್ರಿಯತೆಯನ್ನು ಗಳಿಸಿರುವ ಮಹಾಭಾರತ ಕಥಾವಸ್ತುವನ್ನು ಒಳಗೊಂಡಿದೆ.
- ಕೃಷ್ಣನ ದೈವಿಕ ಪ್ರಭಾವ, ಶರಣಜನ ವತ್ಸಲತೆ, ಮಹಿಮಾನ್ವಿತ ಚರಿತ್ರೆ ಮುಂತಾದ ಅಂಶಗಳು ಪ್ರಮುಖವಾಗಿವೆ.
- ಮಾನವಸ್ವಭಾವದ ನಾನಾ ಮುಖಗಳನ್ನು ಸಂಬಂಧಗಳನ್ನು ಸಂಘರ್ಷಗಳನ್ನು ಹೃದಯಸ್ಪರ್ಶಿಯಾಗಿ ನಿರೂಪಿಸಿದ್ದಾರೆ.
- ಸತ್ಯಧರ್ಮಗಳಿಂದ ನಡೆದರೆ ಇಹಪರಗಳಲ್ಲಿ ಶ್ರೇಯಸ್ಸಾಗುವುದು ಎಂಬ ಭಾರತೀಯ ಜೀವನದೃಷ್ಟಿಯನ್ನು ಪೋಷಿಸುತ್ತದೆ.
- ಪಂಚಮವೇದವಾದ ಇದು ಅವರವರಿಗೆ ಇಷ್ಟವಾದುದು ಇಲ್ಲಿ ದೊರೆಯುತ್ತದೆ.
- ಕೃತಿಯ ಭಾಷೆ, ಶೈಲಿ ಛಂದಸ್ಸು, ನಡುಗನ್ನಡ, ವಿವಿಧ ಗಣ ಪರಿವೃತ್ತಿ ಹಾಗೂ ಉತ್ಕೃಷ್ಟವಾದ ಮಾತ್ರಾ ಬಂಧವಾದ ಭಾಮಿನೀ ಷಟ್ಪದಿ.
- ನವರಸವಿರುವ ವಿವಿಧಾಲಂಕಾರಗಳಿಂದ ಸಂವೃದ್ಧವಾಗಿದ್ದು, ಕಾವ್ಯಗುಣಗಳಿಂದ ಮೆರೆಯುವಂತಹ ಕೃತಿಯಾಗಿದೆ.
- ಧೀರ ಗಂಭೀರ ಶೈಲಿಯ ಗಮಕದಿಂದ ಹೆಚ್ಚು ಹೆಚ್ಚು ಆತ್ಮೀಯವಾಗಿದೆ
- ಅನ್ಯಾದೃಶವಾದ ಪ್ರತಿಭೆ ಪಾಂಡಿತ್ಯದ ಕಾವ್ಯವಾಗಿದೆ.

'**ಕರ್ಣಾಟ ಭಾರತ ಕಥಾಮಂಜರಿ**'ಯು ವ್ಯಾಸರ ಸಂಸ್ಕೃತ ಮಹಾಭಾರತದ ಮೊದಲ ಹತ್ತುಪರ್ವಗಳ ಕಥೆಯನ್ನು ಸ್ವತಂತ್ರವಾಗಿ ಅನುವಾದಿಸಿರುವ ಜನಪ್ರಿಯ ಮಹಾಕಾವ್ಯವಾಗಿದೆ. ಇದರ ಕರ್ತೃ ಕುಮಾರವ್ಯಾಸ ಈ ಕೃತಿಯಲ್ಲದೆ '**ಐರಾವತ**' ಎಂಬ ಗ್ರಂಥವನ್ನು ರಚಿಸಿದ್ದಾನೆ ಎಂದು ಸಾಮ್ಯವಾಗಿ ತಿಳಿದುಬರುತ್ತದೆ. ಈ ಕೃತಿಗೆ ಆಧಾರವಾಗಿರುವ ಹಸ್ತಪ್ರತಿಗಳು ಅವುಗಳ ಇತಿಹಾಸ ಇತರ ದಂತಕಥೆ ಮೂಲದಲ್ಲಿರುವ ಪರ್ವಗಳು, ಕುಮಾರವ್ಯಾಸ ರಚಿಸಿರುವ ಪರ್ವಗಳು, ಕೆಲವು ಕಥಾಂಶಗಳು ಸ್ಥಳಾಂತರಗೊಂಡಿರುವ ಬಗೆ ಎಲ್ಲವನ್ನೂ ಸಂಪಾದಕರು ವಿವರಿಸುತ್ತಾರೆ.

ಪ್ರತಿ ಪರ್ವ ರಸೋದಯ ಎಂಬಂತೆ ಕುಮಾರವ್ಯಾಸನ ಪ್ರತಿ ಪರ್ವ ಈ ರೀತಿ ಇದೆ. ಆದಿಪರ್ವದಲ್ಲಿ ಕರ್ಣನ ಜನನ, ಕಿಂದಮಮುನಿಶಾಪ, ಎಲ್ಲಾ ಪರ್ವಗಳಂತೆ ಉದ್ಯೋಗಪರ್ವದಲ್ಲಿ ಕೃಷ್ಣರಾಯಭಾರದ ಪೂರ್ವ ಸಮಾಲೋಚನೆ, ವಿದುರಾತಿಥ್ಯ, ಕೃಷ್ಣರಾಯಭಾರ, ಕರ್ಣಭೇದನೀತಿ, ಕುಂತಿ-ಕರ್ಣ ಸಂದರ್ಶನ ಇತ್ಯಾದಿ ಅಂಶಗಳು ಕವಿಯ ವ್ಯುತ್ಪತ್ತಿ ಪ್ರತಿಭೆಗಳ ಫಲವಾದವು.

ಕುಮಾರವ್ಯಾಸನಲ್ಲಿ ಶೃಂಗಾರ-ಹಾಸ್ಯ, ಶೃಂಗಾರ-ರೌದ್ರ, ಕುರಣ-ಭಕ್ತಿ, ವೀರ-ರೌದ್ರ, ರೌದ್ರ-ಭೀಭತ್ಸ ಹಲವಾರು ರೀತಿಯಲ್ಲಿ ವ್ಯಕ್ತವಾಗಿರುವ ನವರಸಗಳನ್ನು ಕಾಣಬಹುದು.

ವರ್ಣನೆಗಳ ವಿಷಯದಲ್ಲಿ ಕುಮಾರವ್ಯಾಸನ ಹಿತಮಿತವಾದ ಅಭಿರುಚಿ ಮೆಚ್ಚುವಂತಹದು. ಉದ್ಯೋಗಪರ್ವವನ್ನು ಗಮನಿಸಿದರೆ ಇದರ ವಿಷಯ ಸ್ಪಷ್ಟವಾಗುತ್ತದೆ. ದುರ್ಯೋಧನ ಶಿಶುಪಾಲರು ಕೃಷ್ಣನನ್ನು ಉದ್ದೇಶಿಸಿ ಮಾಡಿದ ನಿಂದಾಸ್ತುತಿ ಇತ್ಯಾದಿ ಅಂಶಗಳನ್ನು ಕಾಣಬಹುದು.

ಕುಮಾರವ್ಯಾಸನ ಭಾಷಾಶೈಲಿ, ವಿಶಿಷ್ಟ ಶಬ್ದಗಳು, ವಿಶಿಷ್ಟ ನಾಮರೂಪಗಳು, ಸಂಸ್ಕೃತೋಕ್ತಿಗಳ ಕನ್ನಡರೂಪ, ಛಂದಸ್ಸು, ನುಡಿಗಟ್ಟು, ಗಾದೆ ಮಾತುಗಳು, ಅರಿಸಮಾಸಗಳು, ಅಲಂಕಾರಗಳು, ಸ್ವಾಭಾವೋಕ್ತಿಗಳು, ಮುಂತಾದವುಗಳನ್ನು ಪ್ರತಿಪದ್ಯ, ಪರ್ವಗಳೊಂದಿಗೆ ಸಂಪಾದಕರು ಉದಾಹರಣೆಗಳೊಂದಿಗೆ ಪ್ರಸ್ಥಾಪಿಸುತ್ತಾರೆ.

ಮಹಾಭಾರತದ ಪಾತ್ರಗಳು ಸಹ ಕಥೆಯೇ ಹಾಗೆಯೇ ಕಾಲದಿಂದ ಕಾಲಕ್ಕೆ ಬದಲಾದಂತೆ, ಕುಮಾರವ್ಯಾಸಭಾರತದ ಪಾತ್ರಗಳನ್ನು ನವೀಕರಿಸುತ್ತಾನೆ. ಭೀಷ್ಮ ವಿದುರರು ಮಾತ್ರವಲ್ಲದೇ ಕರ್ಣ ದುರ್ಯೋಧನರು ಸಹ ಕೃಷ್ಣಪ್ರಭಾವದ ಕೂಸುಗಳಾಗುತ್ತಾರೆ.

ಎಂ.ವಿ.ಸೀತಾರಾಮಯ್ಯನವರು ಪರಿಷ್ಕರಣದಲ್ಲಿ ಎಸ್.ಎನ್.ಕೃಷ್ಣಜೋಯಿಸ್, ಕುವೆಂಪು ಮತ್ತು ಮಾಸ್ತಿ ವೆಂಕಟೇಶ ಅಯ್ಯಂಗಾರ್. ಪೇಟೆ ಮುದ್ರಣಗಳನ್ನು ಪರಿಶೀಲಿಸಿ ಪ್ರತಿಯೊಂದರಲ್ಲಿಯೂ, ಪರ್ವ- ಪದ್ಯಗಳಲ್ಲಿ ಇರುವ ವ್ಯತ್ಯಾಸವನ್ನು ವಿವಿಧ ಪ್ರತಿಗಳ ಪಾಠಾಂತರಗಳನ್ನು ಪದ್ಯದೊಂದಿಗೆ ಉದಾಹರಣೆ ನೀಡಿ, ಪರಿಷ್ಕರಣದ ಮಹತ್ವ, ಕಾರ್ಯ ವಿಧಾನ, ಅನುಕೂಲತೆಗಳನ್ನು ಪರಿಚಯಿಸುತ್ತಾರೆ.

ಎಂ.ವಿ.ಸೀತಾರಾಮಯ್ಯನವರು ಸಂಪಾದನಾ ಕಾರ್ಯಕ್ಕೆ ಅವಲೋಕಿಸಿರುವ ಕೆಲವು ಪ್ರತಿಗಳನ್ನು ಇಲ್ಲಿ ಪ್ರಸ್ಥಾಪಿಸುತ್ತಾರೆ. ಅವುಗಳೆಂದರೆ,

- ಎಚ್.ಎಂ.ಶಂಕರನಾರಾಯಣರಿಂದ ದಾನವಾಗಿ ಬಂದ ಹಸ್ತಪ್ರತಿಗಳು.
- ಬಿ.ಎಂ.ಶ್ರೀಕಂಠಯ್ಯ, ಟಿ.ಎಸ್.ವೆಂಕಣ್ಣಯ್ಯ ಮತ್ತು ಡಿ.ಎಲ್.ನರಸಿಂಹಾಚಾರ್ಯರಿಂದ ಸಂಗ್ರಹವಾದ ಪ್ರತಿಗಳು.

- ಕುವೆಂಪು ಮತ್ತು ಮಾಸ್ತಿ ವೆಂಕಟೇಶ ಅಯ್ಯಂಗಾರ್‌ಅವರು ಸಂಪಾದಿಸಿದ 'ಕರ್ಣಾಟ ಭಾರತ ಕಥಾಮಂಜರಿ'.
- ಪೇಟೆ ಮುದ್ರಣದ ಪ್ರತಿಗಳನ್ನು ಪರಿಶೀಲಿಸಿರುವ ಅಂಶಗಳನ್ನು ವ್ಯಕ್ತಪಡಿಸುತ್ತಾರೆ.

ನಂತರ ಸಂಕೇತಾಕ್ಷರಗಳ ವಿವರವನ್ನು ಸ್ಪಷ್ಟವಾಗಿ ನೀಡುತ್ತಾರೆ.

**ಎಂ.ವಿ.ಸೀತಾರಾಮಯ್ಯನವರ ಉದ್ಯೋಗಪರ್ವ ಒಳಗೊಂಡಿರುವ ಭಾಗಗಳು**

೧. ಅರ್ಜುನ ದುರ್ಯೋಧನರು ಕೃಷ್ಣನಲ್ಲಿ ಹೋದದ್ದು - ೨೮ ಪದ್ಯಗಳು

೨. ಸಂಜಯನ ದೌತ್ಯ - ೧೪ ಪದ್ಯಗಳು

೩. ಕೃಷ್ಣ ಸಂಧಾನ - ೧೧೫ ಪದ್ಯಗಳು

೪. ಕರ್ಣನನ್ನು ಭೇದಿಸಿದ್ದು - ೨೭ ಪದ್ಯಗಳು

೫. ಕುರುಕ್ಷೇತ್ರಕ್ಕೆ ಪಯಣ - ೦೯ ಪದ್ಯಗಳು

ಒಟ್ಟು ೧೯೩ ಪದ್ಯಗಳಿವೆ.

ಅಂತಿಮವಾಗಿ ಅನುಬಂಧದಲ್ಲಿ ತಾವು ಪರಿಶೀಲಿಸಿದ ಕೃತಿಗಳು, ಸಂಪಾದಕರು, ಪ್ರಕಾಶನ ಸ್ಥಳವನ್ನು ಸ್ಪಷ್ಟವಾಗಿ ಪಟ್ಟಿಮಾಡಿದ್ದಾರೆ.

ಇವರ ಪ್ರಕಟಣೆಯ ವಿಶೇಷತೆಯೆಂದರೆ ಪ್ರತಿಪುಟದಲ್ಲಿಯೂ ಪದ್ಯದ ಪಾಠಾಂತರ ಸ್ವೀಕೃತಪಾಠ ಹಾಗೂ ಪದಗಳ ಅರ್ಥವನ್ನು ಅಡಿಟಿಪ್ಪಣಿಯಲ್ಲಿ ನೀಡಿರುವುದು ಗಮನಾರ್ಹ.

ಮೇಲೆ ಗಮನಿಸಿದ ಸಂಪಾದನೆಗಳಲ್ಲದೆ ವಿವಿಧ ಪ್ರಾಚೀನ ಉದ್ಯೋಗ ಪರ್ವದ ಆವೃತ್ತಿಗಳನ್ನು ಗಮನಿಸುವ ಅಗತ್ಯವಿದೆ. ಅವು ಈ ಕೆಳಕಂಡಂತೆ ಇವೆ.

೧. ಕನ್ನಡ ಭಾರತ ದಶಪರ್ವ
ವಿಚಾರದರ್ಪಣ ಮುದ್ರಾಕ್ಷರ ಶಾಲೆ
ಬೆಂಗಳೂರು
೧೮೬೫

೨. ಕನ್ನಡ ಭಾರತದೊಳ್ ಆದಿಪಂಚಕವು
ವಿಚಾರ ದರ್ಪಣ ಮುದ್ರಾಕ್ಷರ ಶಾಲೆ
ಬೆಂಗಳೂರು
೧೮೬೫

೩. ಕನ್ನಡ ಭಾರತವು
ವಿಚಾರ ದರ್ಪಣ ಮುದ್ರಾಕ್ಷರ ಶಾಲೆ
ಬೆಂಗಳೂರು
೧೮೭೫

೪. ಕನ್ನಡ ಭಾರತ (ಆದಿ ಪಂಚಕವೂ ಯುದ್ಧ ಪಂಚಕವೂ)
ಸಂ. ಸಿದ್ಧಾಂತಿ ಸುಬ್ರಹ್ಮಣ್ಯಶಾಸ್ತ್ರಿ, ಸ.ತಿರುವೆಂಕಟಾಚಾರ್ಯ
ಸರಸ್ವತೀ ನಿಲಯ ಮುದ್ರಾಕ್ಷಾರ ಶಾಲೆ
ಮದ್ರಾಸು
೧೮೭೭

೫. ಕರ್ಣಾಟ ಭಾರತ ಕಥಾಮಂಜರಿ
ಸರಸ್ವತೀ ವಿಲಾಸ ಮುದ್ರಾಕ್ಷಾರ ಶಾಲೆ
ಮದ್ರಾಸು
೧೮೮೦

೬. ಕರ್ಣಾಟ ಭಾರತಾಷ್ಟಾದಶಪರ್ವ ಸಂಪೂರ್ಣ ಗ್ರಂಥ
ವೆ.ಬಿ.ಸುಬ್ಬಯ್ಯ ಅಂಡ್ ಸನ್ಸ್
ಮೈಸೂರು ಬುಕ್ ಡಿಪೋ ಪ್ರೆಸ್,
ಬೆಂಗಳೂರು
೧೮೮೭

೭. ಕನ್ನಡ ಮಹಾಭಾರತದಲ್ಲಿ ಪ್ರಥಮಾದಿ ದಶಪರ್ವಗಳು
ವಾಗೀಶ್ವರ ಮುದ್ರಾಕ್ಷರ ಶಾಲೆ
ಬೆಂಗಳೂರು
೧೮೮೮

೮. ಕನ್ನಡ ಮಹಾಭಾರತ ದಶಪರ್ವ
ಸಂ. ನಂಜನಗೂಡು ಶ್ರೀಕಂಠಶಾಸ್ತ್ರಿ,
ಶ್ರೀವಾಣಿವಿಲಾಸ ಬುಕ್‌ಡಿಪೊ
ಮೈಸೂರು
೧೯೦೯

೯. ಕನ್ನಡ ಮಹಾಭಾರತ ದಶಪರ್ವವು
ವಾಜಪೇಯ ಗೋವಿಂದಯ್ಯ
ಬೆಂಗಳೂರು
೧೯೧೬

೧೦. ಶ್ರೀಮನ್ಮಹಾಭಾರತ ದಶಪರ್ವವು
- ಸಂ.ಭಾರತೀ ಸಂಪಂಗಿರಾಮ,
ಸರಸ್ವತೀರತ್ನಾಕರ ಬುಕ್‌ಡಿಪೋ
ಬೆಂಗಳೂರು
೧೯೨೮

೧೧. ಶ್ರೀಮನ್ಮಹಾಭಾರತ ದಶಪರ್ವವು
ಚಿಕ್ಕಪೇಟೆ ಬುಕ್‌ಡಿಪೋ
ಬೆಂಗಳೂರು
೧೯೩೬

೧. ವಿರಾಟಪರ್ವವೂ - ಉದ್ಯೋಗಪರ್ವವೂ
ಸಂ. ಸಿದ್ದಾಂತಿ ಸುಬ್ರಹ್ಮಣ್ಯಶಾಸ್ತ್ರಿ
ಸರಸ್ವತೀವಿಲಾಸ ಮುದ್ರಾಕ್ಷರಶಾಲೆ
ಮದ್ರಾಸು
೧೮೭೭

೨. ಕುಮಾರವ್ಯಾಸ ಭಾರತ ಉದ್ಯೋಗಪರ್ವ
ಸಂ.ಆರ್.ಶಾಮಶಾಸ್ತ್ರಿ
ಓರಿಯೆಂಟಲ್ ಲೈಬ್ರರಿ
ಮೈಸೂರು ವಿಶ್ವವಿದ್ಯಾಲಯ
೧೯೨೨

೩. ಉದ್ಯೋಗ ಪರ್ವ ಸಂಗ್ರಹ
ಸಂ.ಪಿ.ಕೆ. ಭಾಗೋಜಿ
ಕ್ವಾಲಿಟಿ ಪಬ್ಲಿಷರ್ಸ್, ಧಾರವಾಡ

* * * * *

# ಅಧ್ಯಾಯ - ೩

# ಸಂಪಾದನಾ ಕಾರ್ಯದ ವಿಧಿ ವಿಧಾನಗಳು

ಸಾಹಿತ್ಯ ಕ್ಷೇತ್ರದಲ್ಲಿ ಸಂಪಾದನಾಕಾರ್ಯ ಅದ್ವಿತೀಯವಾದದ್ದು. ಪ್ರಾಚೀನ ಗ್ರಂಥಗಳನ್ನು ಅವುಗಳ ಹಸ್ತಪ್ರತಿಗಳ ಸಹಾಯದಿಂದ ಪರಿಷ್ಕರಿಸಿ ಮುದ್ರಿಸುವುದೇ ಸಂಪಾದನೆ. ಈ ಕಾರ್ಯಕ್ಕೆ ದೀರ್ಘಕಾಲಬೇಕು. ಒಂದು ಗ್ರಂಥವನ್ನು ಒಬ್ಬನು ಒಂದು ಸಲ ಸಂಪಾದನೆ ಮಾಡಿದರೆ ಸಾಲದು. ಆ ಗ್ರಂಥಗಳ ಹಸ್ತಪ್ರತಿಗಳು ಕಾಲದಿಂದ ಕಾಲಕ್ಕೆ ದೊರೆಯುತ್ತಲೇ ಇರುತ್ತದೆ. ಇದು ನಿರಂತರವಾದ ಕಾರ್ಯವಾಗಿದ್ದು ಅವುಗಳ ಉಪಯೋಗದಿಂದ ಹೊಸ-ಹೊಸ ಮಾರ್ಪಾಡುಗಳನ್ನು ಮಾಡುವುದು ಸಂಪಾದಕರ ಅತಿ ಮುಖ್ಯ ಕಾರ್ಯ.

ಸಂಪಾದಕರ ಮೂಲೋದ್ದೇಶವೆಂದರೆ, ಕೃತಿಯು ಕವಿಯು ಅಥವಾ ಗ್ರಂಥಕರ್ತನ ಸ್ವಹಸ್ತಪ್ರತಿಗಳೇ ಅಥವಾ ಪರಂಪರಾನುಗತ ಪ್ರತಿಗಳೇ ಎಂದು ನಿರ್ಧರಿಸಲು ಅವುಗಳ ಸ್ಖಾಲಿತ್ಯಗಳು, ಇತರ ಪ್ರತಿಗಳು ಮುಂತಾದವುಗಳನ್ನು ಪರಿಶೀಲಿಸಿ ಮುದ್ರಣಕ್ಕೆ ಸಿದ್ಧಗೊಳಿಸುವುದು. **ಉದಾಹರಣೆ :** ಕುಮಾರವ್ಯಾಸನ 'ಕರ್ಣಾಟ ಭಾರತ ಕಥಾಮಂಜರಿ'ಯನ್ನು ಸಂಪಾದಿಸಲು ಸಂಪಾದಕರು ಕೈಗೊಂಡಿರುವ ಕಾರ್ಯ ಗಣನೀಯವಾದುದು. ಕುಮಾರವ್ಯಾಸ ಭಾರತದ ಸಂಪಾದನೆಯ ಕಾರ್ಯದಲ್ಲಿ ಶ್ರಮಿಸಿದ ಮಹನೀಯರಲ್ಲಿ - ಶಾಮಶಾಸ್ತ್ರಿ, ತ.ಸು.ಶಾಮರಾಯ, ಎಸ್.ಎನ್.ಕೃಷ್ಣಜೋಯಿಸ್, ಎಂ.ವೀ.ಸೀತಾರಾಮಯ್ಯ, ಕುವೆಂಪು, ಟಿ.ಎಸ್.ಶಾಮರಾವ್, ಮಾಸ್ತಿ ವೆಂಕಟೇಶ ಅಯ್ಯಂಗಾರ್, ಎಚ್.ಎಂ.ಶಂಕರನಾರಾಯಣರಾವ್, ಡಿ.ವಿ.ಶೇಷಗಿರಿರಾವ್ ಹೀಗೆ ಮುಂತಾದವರು ಈ ಸಾಲಿನಲ್ಲಿ ನಿಲ್ಲುತ್ತಾರೆ. ಆದರೆ ಈ ಸಂಪಾದಕರ ಉದ್ದೇಶಗಳು ಬೇರೆ-ಬೇರೆ ಇರುವುದನ್ನು ಕಾಣಬಹುದು.

ಡಿ.ಎಲ್.ನರಸಿಂಹಚಾರ್ ಅವರ ಪ್ರಕಾರ ಗ್ರಂಥಸಂಪಾದನೆಯ ಪರಮೋದ್ದೇಶ ಕಾಲಕ್ರಮದಲ್ಲಿ ದೋಷ ಭೂಯಿಷ್ಟವಾಗಿರುವ ಕವಿಕೃತಿಯನ್ನು ಅದರ ಪರಿಶುದ್ಧರೂಪಕ್ಕೆ ಅಂದರೆ ಕವಿಯಪಾಠಸ್ವರೂಪಕ್ಕೆ ಸಾಮುಗ್ರಿಗಳನ್ನು ಬಳಸಿಕೊಂಡು ಮರಳಿ ತರುವುದು ಅಥವಾ ಮೂಲಪಾಠದ ಸಮೀಪಕ್ಕೆ ತರುವುದು ಅಸತ್ಯಗಳೂ, ಅಪಾರ್ಥಗಳೂ ಉಂಟಾಗದಂತೆ ಸಾಧಾರಣ ವಾಚಕರ ದೃಷ್ಠಿಯಿಂದ ಹಾಗೂ ಸಂಸ್ಕೃತಿಯ ರಕ್ಷಣೆಯ ದೃಷ್ಠಿಯಿಂದ ಆದಷ್ಟು ಮಟ್ಟಿಗೆ ಪರಿಷ್ಕರಗೊಳಿಸಿ ಸಂಪಾದಿಸುವುದು ಅತಿಮುಖ್ಯ.

ಸಾಹಿತ್ಯಪ್ರೇಮಿಗಳಿಗೆ, ಸಾಹಿತ್ಯ ವಿಮರ್ಶಕರಿಗೆ, ಅಲಂಕಾರ ಶಾಸ್ತ್ರಜ್ಞನರಿಗೆ, ವೈಯಕರಣರಿಗೆ, ಛಂದೋವೇದಿಗಳಿಗೆ, ಭಾಷಾಚರಿತ್ರ ಲೇಖಕರಿಗೆ, ನಿಘಂಟು ನಿರ್ಮಾಪಕರಿಗೆ ಕವಿಕೃತಿಯ ಪರಿಶುದ್ಧಪಾಠ ದೊರೆಯುವಂತೆ ಮಾಡುವುದು ಸಂಪಾದಕನ ಅತಿಶ್ರೇಷ್ಠವಾದ ಕಾರ್ಯ.

ಹಿಂದಿನ ಪರಂಪರಾನುಗತ ಹಸ್ತಪ್ರತಿಗಳಲ್ಲಿ ಕಾಣುವ ತಪ್ಪುಗಳಿಗೆಲ್ಲ ಲಿಪಿಕಾರರೇ ಕಾರಣರೆಂಬ ನಂಬಿಕೆ ಸಾಧಾರಣವಾಗಿ ರೂಢಿಯಲ್ಲಿದೆ. ಆದರೆ ಇಂದು ಅಚ್ಚಿಗೆ ಹಸ್ತಪ್ರತಿಯನ್ನು ಕವಿಯೇ ಸಿದ್ಧಪಡಿಸುತ್ತಾನೆ. ಆದ್ದರಿಂದ ಇಂದಿನ ಮುದ್ರಣಕ್ಕೆ ಕವಿಯ ಸ್ವಹಸ್ತಪ್ರತಿಯ ಬೆಲೆಯನ್ನೇ ಕೊಡಬಹುದು.

ಕುಮಾರವ್ಯಾಸ ಭಾರತದ ಉದ್ಯೋಗಪರ್ವಗಳ ಸಂಪಾದನ ಕಾರ್ಯದ ವಿಧಿ ವಿಧಾನವನ್ನು ದೃಷ್ಟಿಯಲ್ಲಿಟ್ಟುಕೊಂಡು ಹೇಳುವುದಾದರೆ, **ಮಾಸ್ತಿ ವೆಂಕಟೇಶ ಅಯ್ಯಂಗಾರ್** ಮತ್ತು **ಕುವೆಂಪು** ಅವರ '**ಕರ್ಣಾಟ ಭಾರತ ಕಥಾಮಂಜರಿ**'ಯ ಉದ್ಯೋಗಪರ್ವದ ಸಂಪಾದನೆಯನ್ನು ಗಮನಿಸಿದರೆ ಇವರ ಮುಖ್ಯ ಉದ್ದೇಶವೆಂದರೆ ಜನಸಾಮಾನ್ಯರನ್ನು ದೃಷ್ಟಿಯಲ್ಲಿಟ್ಟುಕೊಂಡು ಜನತೆಗೆ ಅತಿಕಡಿಮೆ ಬೆಲೆಗೆ ಸುಂದರವಾದ ಮುದ್ರಣದಲ್ಲಿ ಕುಮಾರವ್ಯಾಸಭಾರತ ದೊರೆಯಬೇಕು, ಕಾವ್ಯ ಜನಸಾಮಾನ್ಯರನ್ನು ತಲುಪಬೇಕು ಎಂಬುದು, ಈ ನಿಟ್ಟಿನಲ್ಲಿ ಕುಮಾರವ್ಯಾಸ ಭಾರತದ ಹತ್ತು ಪರ್ವಗಳನ್ನು ೧೯೫೮ರಲ್ಲಿ ಕೇವಲ ಎರಡು ರೂಪಾಯಿಗಳಿಗೆ ಮುದ್ರಿಸಿ ಪ್ರಕಟಿಸಿದರು.

೧೯೭೪ರಲ್ಲಿ ಎರಡನೆಯ ಮುದ್ರಣ, ೧೯೮೮ರಲ್ಲಿ ಮೂರನೆಯ ಮುದ್ರಣ ಹೀಗೆ ಹಲವು ಮುದ್ರಣಗಳಲ್ಲಿ ಇದನ್ನು ಕಾಣಬಹುದು.

ಇವರು ಸಂಪಾದಿಸಿರುವ ಇವರ ಪ್ರಕಟಿತ ಗ್ರಂಥದ '**ತೋರಣನಾಂದಿ**' ಅತ್ಯಂತ ಪ್ರಮುಖವಾದ ಮಾಹಿತಿ ನೀಡುವ ಅಂಶವಾಗಿದೆ. ಯಾವ ಸಂಪಾದನಾ ಕಾರ್ಯದಲ್ಲಿಯೂ ಈ ಅಂಶವನ್ನು ಕಾಣುವುದಿಲ್ಲ. ಇದು ಇವರ ಹೊಸ ಸೃಷ್ಟಿ. ಈ ತೋರಣನಾಂದಿಯಲ್ಲಿ ಸಂಪಾದನೆಯ ಉದ್ದೇಶ, ಕವಿ, ಕಾಲ, ಭಾಷೆ, ಶೈಲಿ, ಕವಿಯವೈಶಿಷ್ಟ್ಯ, ರೂಪಕ, ಹಾಗೂ ತಾವು ಸಂಪಾದಿಸಲು ಅನುಸರಿಸಿದ ಕ್ರಮವನ್ನು ಅತಿಸೂಕ್ಷ್ಮವಾಗಿ, ಸ್ಪಷ್ಟವಾಗಿ ತಿಳಿಸುತ್ತಾರೆ.

ಕುವೆಂಪು ಅವರ ಮಾತಿನಲ್ಲಿ ಹೇಳುವುದಾದರೆ ಈ ಸಂಪುಟವನ್ನು ಸಂಪಾದಿಸಿದ್ದೇವೆ ಅಂದರೆ ಸಂಶೋಧನೆಗೆ ಗಮನ ನೀಡಿಲ್ಲ. ಎಲ್ಲೆಲ್ಲಿ ಸಾಧ್ಯವೊ ಅಲ್ಲಲ್ಲಿ ಅನಿವಾರ್ಯವಾಗಿ ನಾಲ್ಕಾರು ಓಲೆ ಪ್ರತಿಗಳನ್ನು ನೋಡಿದ್ದೇವೆ ಎನ್ನುತ್ತಾರೆ.

ಕುವೆಂಪು ಮತ್ತು ಮಾಸ್ತಿ ವೆಂಕಟೇಶ ಅಯ್ಯಂಗಾರ್ಅವರ ಸಂಪಾದನ ಸಮಯದಲ್ಲಿ ಬಳಸಿರುವ ಪ್ರತಿಗಳು.

೧. ಕ. ೨೦೫ನೆಯ ಪ್ರತಿ (ಇದು ತಕ್ಕಮಟ್ಟಿಗೆ ಶುದ್ಧ, ವಿಶ್ವಾಸಾರ್ಹ)

೨. ಎ. ೫೭ನೆಯ ಕಲ್ಲಚ್ಚಿನ ಪ್ರತಿ (ಇದು ೧೮೫೦ರಲ್ಲಿ ಮಂಗಳೂರಿನಲ್ಲಿ ಮುದ್ರಣಗೊಂಡಿದ್ದು 'ಕ' ಪ್ರತಿಯನ್ನೇ ಹೋಲುತ್ತದೆ)

೩. ಶ್ರೀ ಟಿ.ಎನ್. ಕೃಷ್ಣಯ್ಯಶೆಟ್ಟರ ಮುದ್ರಿತ ಪ್ರತಿ (ಸು.೧೯೨೫ರಲ್ಲಿ ೧೮ ಪರ್ವಗಳು)

೪. ಓರಿಯಂಟಲ್ ಲೈಬ್ರರಿಯ ಪ್ರಕಟಣೆಗಳು.

ಇವುಗಳೊಂದಿಗೆ ಬಿ.ಎಂ.ಶ್ರೀಕಂಠಯ್ಯನವರ ಪ್ರಧಾನ ಸಂಪಾದಕತ್ವದ ನೇತೃತ್ವದಲ್ಲಿ ಶ್ರೀ ಡಿ.ಎಲ್. ನರಸಿಂಹಾಚಾರ್‌ಅವರ ಭೀಷ್ಮಪರ್ವ.

ಶ್ರೀ ಕೃಷ್ಣ ಜೋಯಿಸರ ಉದ್ಯೋಗಪರ್ವ.

ಶ್ರೀ ಎನ್. ಅನಂತರಂಗಾಚಾರ್ಯರ ಉಳಿದ ಪರ್ವಗಳನ್ನು ಸಾಮಗ್ರಿಗಳನ್ನಾಗಿ ನೋಡಿ ಗ್ರಂಥ ಸಂಪಾದನೆ ಮಾಡಿದ್ದಾರೆ.

ಕುವೆಂಪು ಮತ್ತು ಮಾಸ್ತಿ ವೆಂಕಟೇಶ ಅಯ್ಯಂಗಾರ್ ಸಂಪಾದನೆಯಲ್ಲಿ ಶಕಟರೇಫದ ಬಳಕೆಯಿಲ್ಲ. ಪರಿಷ್ಕರಣ, ಅಡಿಟಿಪ್ಪಣಿ ಯಾವುದರ ಪ್ರಸ್ತಾಪವೂ ಇಲ್ಲ, ಒಟ್ಟಾರೆ ಓದುಗನಿಗೆ ಕಾವ್ಯ ತಲುಪುವುದು ಇವರ ಉದ್ದೇಶ.

ಕುವೆಂಪು ಮತ್ತು ಮಾಸ್ತಿ ವೆಂಕಟೇಶ ಅಯ್ಯಂಗಾರ್ ಸಂಪಾದಿಸಿರುವ ಕುಮಾರವ್ಯಾಸ ಭಾರತದ ಉದ್ಯೋಗಪರ್ವಕ್ಕೆ ಪ್ರಚಲಿತ ಮುದ್ರಿತ ಪ್ರತಿಯನ್ನು, ಓರಿಯಂಟಲ್ ಲೈಬ್ರರಿಯ ಸಂಶೋಧಿತ ಪ್ರತಿಯನ್ನು, ಆಧಾರವಾಗಿಟ್ಟುಕೊಂಡಿದ್ದಾರೆ ಎಂಬುದು ಮುಖ್ಯವಾದ ಸಂಗತಿ.

''ತೋರಣನಾಂದಿ ಒಂದು ಸಹೃದಯ ವಿಮರ್ಶೆ; ಕನ್ನಡನಾಡಿನ ಹಿರಿಯ ಲೇಖಕ ವಿಮರ್ಶಕರ ಬರವಣಿಗೆಗಳಿಂದ ಆಯ್ದುಕೋದ ತೋರಣನಾಂದಿಯಾಗಿದೆ'' ಎಂದು ಕುವೆಂಪು ಅವರೇ ತಿಳಿಸುತ್ತಾರೆ. ಇವರ ಉದ್ಯೋಗಪರ್ವದಲ್ಲಿ ೧೧ ಸಂಧಿ ೬೭೧ ಪದ್ಯಗಳಿವೆ.

ಉದ್ಯೋಗಪರ್ವಗಳ ಸಂಪಾದನೆಯಲ್ಲಿ ಮುಖ್ಯವಾದ ಡಾ॥ ಆರ್. ಶಾಮಶಾಸ್ತ್ರಿ ಅವರಿಂದ ೧೯೨೨ರಲ್ಲಿ ಸಂಪಾದಿತವಾದ ಉದ್ಯೋಗಪರ್ವ ನಮಗೆ ದೊರೆಯದಿರುವುದು ವಿಷಾದನೀಯವಾದ ಸಂಗತಿ. ಈ ಕೃತಿ ದೊರೆಯದಿರುವ ಕಾರಣ ಅವರ ಸಂಪಾದನೆಯ ಉದ್ದೇಶ, ಅನುಸರಿಸಿದ ಕ್ರಮ ವಿಧಿ ವಿಧಾನ ಪಾಠಾಂತರ ಯಾವುದನ್ನು ಅರಿಯಲು ಸಾಧ್ಯವಾಗದಿರುವುದು ದುರ್ಭಾಗ್ಯ.

ಸಂ. ಸಿದ್ಧಾಂತಿ ಸುಬ್ರಹ್ಮಣ್ಯಶಾಸ್ತ್ರಿಯವರು ೧೮೭೭ರಲ್ಲಿ ಮದರಾಸಿನ ಸರಸ್ವತೀ ವಿಲಾಸ ಮುದ್ರಾಕ್ಷರ ಶಾಲೆಯಿಂದ ಸಂಪಾದಿತವಾಗಿರುವ ವಿರಾಟಪರ್ವ ಮತ್ತು ಉದ್ಯೋಗಪರ್ವಗಳು ಎಂಬ ಕೃತಿಯು ಉಪಲಬ್ಧವಾಗಿಲ್ಲವಾದ್ದರಿಂದ ಅನೇಕ ಸತ್ಯ ಸಂಗತಿಗಳನ್ನು ತಿಳಿಯಲು ಸಾಧ್ಯವಿಲ್ಲದಿರುವುದು ವಿಷಾದನೀಯ.

**ಎಂ.ವಿ. ಸೀತಾರಾಮಯ್ಯನವರ 'ಕುಮಾರವ್ಯಾಸ ಭಾರತ ಸಂಗ್ರಹ'**ದ ಉದ್ಯೋಗಪರ್ವದ ಸಂಪಾದನೆಯನ್ನು ಗಮನಿಸಿದರೆ - ಉಜ್ವಲ ಪ್ರತಿಭೆಯನ್ನು ಹೊಂದಿರುವ ಕವಿ ಕುಮಾರವ್ಯಾಸನ ಮಹಾಕಾವ್ಯದ ಸಂಗ್ರಹವನ್ನು ಪ್ರಕಟಿಸುವುದರಿಂದ ಜನಸಾಮಾನ್ಯರಿಗೂ ಪಂಡಿತರಿಗೂ ಕಿಂಚಿತ್ ಪ್ರಮಾಣದಲ್ಲಿ ಉಪಯುಕ್ತವಾಗಬೇಕು ಎಂಬ ಬಯಕೆಯಿಂದ ಸಂಪಾದನಾ ಕಾರ್ಯವನ್ನು ಪ್ರಾರಂಭಿಸಿದರು.

ಬಿ.ಎಂ.ಶ್ರೀ ಪ್ರತಿಷ್ಠಾನದಲ್ಲಿದ್ದ ಹಸ್ತಪ್ರತಿಗಳು, ಬಿ.ಎಂ.ಶ್ರೀಕಂಠಯ್ಯ, ಟಿ.ಎಸ್. ವೆಂಕಣ್ಣಯ್ಯ, ಎ.ಆರ್. ಕೃಷ್ಣಶಾಸ್ತ್ರಿ ಹಾಗೂ ಡಿ.ಎಲ್. ನರಸಿಂಹಾಚಾರ್‌ರವರ ನೆರವಿನಿಂದ ಸಿದ್ಧಗೊಳಿಸಿದ ಹಸ್ತಪ್ರತಿಗಳನ್ನು ಮುಖ್ಯವಾಗಿಟ್ಟುಕೊಂಡು ಹಾಗೂ ಇದರೊಂದಿಗೆ ಮಾಸ್ತಿ ವೆಂಕಟೇಶ ಅಯ್ಯಂಗಾರ್ ಮತ್ತು ಕುವೆಂಪು ಸಂಪಾದಿಸಿದ ಕರ್ಣಾಟ ಭಾರತ ಕಥಾಮಂಜರಿ ಹಾಗೂ ಪೇಟೆ ಮುದ್ರಣಗಳನ್ನು ಪರಿಶೀಲಿಸಿ ೧೯೫೦ರಲ್ಲಿ, ೪೦ ರೂಪಾಯಿಗಳಿಗೆ, ೧೦ ಪರ್ವಗಳನ್ನು ಒಳಗೊಂಡ ಕುಮಾರವ್ಯಾಸ ಭಾರತ ಸಂಗ್ರಹವನ್ನು ಮುದ್ರಿಸಿ ಪ್ರಕಟಿಸಲಾಯಿತು.

ಇವರ ಉದ್ಯೋಗಪರ್ವವು ಆರು ಭಾಗದ ೧೯೩ ಪದ್ಯಗಳನ್ನು ಒಳಗೊಂಡಿದೆ.

ಎಂ.ವಿ.ಸೀತಾರಾಮಯ್ಯನವರು ಓದುಗನಿಗೆ ಅನುಕೂಲವಾಗುವಂತೆ ಪ್ರತಿಪುಟದ ಪದ್ಯಗಳ ಕೆಳಗೆ ಪ್ರತಿ ಪದ್ಯಗಳ ಪಾಠಾಂತರ ಹಾಗೂ ಸ್ವೀಕೃತ ಪಾಠ, ಅವು ಅರ್ಥವಾಗುವಂತೆ ಪದಗಳ ಅರ್ಥವನ್ನು ಅಡಿಟಿಪ್ಪಣಿಯಲ್ಲಿ ಪ್ರತಿಪುಟದಲ್ಲಿಯೂ ನೀಡಿರುವುದು ಗಮನಾರ್ಹ ಸಂಗತಿ.

**ಉದಾಹರಣೆ :**

೧. ಒಂದು ದಿನ ವೊಡ್ಡೋಲಗಕ್ಕೈ
ತಂ[೧]ದು ನಿ[೨]ಖಿಳಾವನಿಯ ರಾಯರ
ಮುಂದಿಯಲಿ ಮುರವೈರಿ ನುಡಿದನು '[೩]ರಾಜಮಂತ್ರವನು[೪]'
ಹಿಂದೆ ಜೂಜಿನ ವಿಲಗದಲಿ ಮನ
ನೊಂದರಿವರಡವಿಯಲಿ ಧರೆಗಿ
ನ್ನೆಂದು ಸೇರುವರೇನು ಹದನೀ ಪಾಂಡುತನಯರಿಗೆ

೧. ದನ ಅ. ಕು ಮಾ. ಪ್ರತಿಗಳಲ್ಲಿ ಇದೆ.
ಸ್ವೀಕೃತಪಾಠ ಪ, ಕ, ಓ, k ಪ್ರತಿಗಳಿಂದ ಸ್ವೀಕರಿಸಿದೆ.

---

೧. ಎಂ. ವಿ. ಸೀತಾರಾಮಯ್ಯನವರ ಸಂಪಾದನೆಯ ಕುಮಾರವ್ಯಾಸ ಭಾರತ ಸಂಗ್ರಹದ ಉದ್ಯೋಗಪರ್ವದ ಮೊದಲನೆಯ ಪದ್ಯ, ಪುಟಸಂಖ್ಯೆ, ೩೦೧.
*ಸೂಚನೆ: ಪದ್ಯಗಳಿಗೆ ಕೊಟ್ಟಿರುವ ಸಂಖ್ಯೆಯು ಅಡಿಟಿಪ್ಪಣಿಯ ಆಕರವನ್ನು ಸೂಚಿಸುತ್ತದೆ.*

೨. ಕಾರಿಯುವ ಎಂದು ಪ್ರ, ಕ, k, ಅ ಪ್ರತಿಗಳಲ್ಲಿದೆ.

ಅರ್ಥ : ವಿಲಗ - ಕಷ್ಟ, ತೊಂದರೆ.

೨. ಮದುವೆಗೋಸುಗ ಬಂದೆನಾವಿ
ನ್ನಿದಱ ಮೇಲಣ ರಾಜಕಾರ್ಯದ
ಹದನನಟ್ಟುವುದಱುವುದು. ಬಹೆವಾವು ಕರಸಿದೊಡೆ।
ಹದುಳ ವಿಹುದೆಂದ ಸುರರಿಪು ಕರು
ಣದಲಿ ಕುಂತೀಸುತ ರನಾ ದ್ರೌ
ಪದಿಯನಭಿಮನ್ಯುವ ಸುಭದ್ರೆಯ ಹರಸಿ ಬೀಳ್ಕೊಂಡ॥

ಅರ್ಥ : ಹದುಳ - ಕ್ಷೇಮ, ನೆಮ್ಮದಿ.

೩. ಮುರಮಥನ [1]ಚಿತ್ತೈಸು[1] ಕೌರವ
ರರಸನತಿ ಸಿರಿವಂತನಿದ ಸಂ
[2]ವರಿ[2]ಸಲಾಪನು ಬಹಳ ಯಾದವ ಸೈನ್ಯಸಾಗರವ।
ಧರೆಯ ಸಂಪದವಿಲ್ಲದಡವಿಯ
ತಿರುಕರಾವಿನಿಬರನು ಸಲೆ ಸಂ
[3]ವರಿ[3]ಸಲಾಪೆವೆ ಕೃಷ್ಣ [4]ನೀನೇ ಸಾಕು ನಮಗೆಂದ[4]॥

೧. ಬಿನ್ನಹವು ಎಂದು (ಕ, ಓ, k, ಅ, ಪ್ರ ಪ್ರತಿಗಳಲ್ಲಿದೆ)

೨. ತ ಎಂದು (ಆ, ಕುಮಾ ಪ್ರತಿಗಳಲ್ಲಿದೆ)

೩. ತ ಎಂದು (ಆ, ಕುಮಾ ಪ್ರತಿಗಳಲ್ಲಿದೆ)

೩ ಸ್ವೀಕೃತಪಾಠ (ಅ ಪ್ರತಿಯಿಂದ)

೪. ನೀ ಸಾಕೆಂದನಾ ಪಾರ್ಥ (ಅ, ಕ, k, ಪ್ರ ಪ್ರತಿಗಳಲ್ಲಿದೆ)

---

೨. ಎಂ. ವಿ. ಸೀತಾರಾಮಯ್ಯನವರ ಸಂಪಾದನೆಯ ಕುಮಾರವ್ಯಾಸ ಭಾರತ ಸಂಗ್ರಹದ ಉದ್ಯೋಗಪರ್ವದ ಪದ್ಯ ಮೂರು ೩, ಪುಟಸಂಖ್ಯೆ, ೩೦೨.

೩. ೧೯ನೆಯ ಪದ್ಯ, ಪುಟಸಂಖ್ಯೆ, ೩೦೭.

ಅರ್ಥ : ಸಂವರಿಸು - ಕಾಪಾಡು, ರಕ್ಷಿಸು.

ಇನಿಬರು - ಇಷ್ಟು ಜನರು.

ಸತಿ - ಚೆನ್ನಾಗಿ, ಪೂರ್ಣವಾಗಿ,

ಆಪೆವೆ - ಶಕ್ತರಾಗುತ್ತೇವೆಯೆ.

ಎಸ್.ಎನ್.ಕೃಷ್ಣಜೋಯಿಸ್‌ಅವರ ೧೯೫೫ರ ಉದ್ಯೋಗಪರ್ವದ ಸಂಪಾದನೆಯನ್ನು ಗಮನಿಸಿದರೆ ಗದುಗಿನ ಭಾರತದ 'ಉದ್ಯೋಗಪರ್ವ' ಅನೇಕ ವಿದ್ಯಾಸಂಸ್ಥೆಗಳ ಪಠ್ಯ ಪುಸ್ತಕವಾಗಿದ್ದರಿಂದ ಇವುಗಳ ಪ್ರತಿಗಳು ಮುಗಿದುಹೋಗಿದ್ದರಿಂದ ಪರಿಷ್ಕರಿಸಿ ಎರಡನೆಯ ಬಾರಿ ಪ್ರಕಟಿಸಲಾಯಿತು.

ಇವರ ಮುಖ್ಯ ಉದ್ದೇಶ ವಿದ್ಯಾರ್ಥಿಗಳ ಓದಿಗೆ ಅನುಗುಣವಾದ ರೀತಿಯಲ್ಲಿ ವಿಷಯವನ್ನು ತಲುಪಿಸಬೇಕಾದ ಕಾರಣ, ಎರಡನೆಯ ಆವೃತ್ತಿಯಲ್ಲಿ ಹಲವು ಮಾರ್ಪಾಡುಗಳನ್ನು ಸಂಧಿಗಳ ಪುನರ್ವಿಂಗಡಣೆ, ಮಾತೃಕೆಯ ವಿವರಗಳನ್ನು ಪೀಠಿಕೆಯಲ್ಲಿ ನೀಡಲಾಗಿದೆ. ಸುಮಾರು ೧೮ ಹಸ್ತ ಪ್ರತಿಗಳನ್ನು ಹಾಗೂ ಅರಮನೆಯ ಸರಸ್ವತೀ ಭಂಡಾರದಲ್ಲಿರುವ ಮೂರು ಮಾತೃಕೆಗಳನ್ನು ಬಳಸಿಕೊಂಡು ಸಂಪಾದಿಸಿದ್ದಾರೆ. ಪ್ರತಿ ಪುಟದಲ್ಲಿಯೂ ಪ್ರತಿಪದ್ಯದ ಪಾಠಾಂತರಗಳನ್ನು ವಿವಿಧ ಪ್ರತಿಗಳಲ್ಲಿ ಇರುವಂತೆ ಸೂಚಿಸಿ, ತಾವು ನಿರ್ಧರಿಸಿರುವ ಸ್ವೀಕೃತಪಾಠವನ್ನು ಇವರ ಸಂಪಾದನೆಯಲ್ಲಿ ಗುರುತಿಸಬಹುದು. ನಿಜವಾದ ಸಂಶೋಧನೆಯ ಕಾರ್ಯವನ್ನು ಎಸ್. ಎನ್. ಕೃಷ್ಣಜೋಯಿಸ್ ಅವರ ಉದ್ಯೋಗಪರ್ವದ ಸಂಪಾದನೆಯಲ್ಲಿ ಕಾಣಬಹುದು. ೧೯೫೫ರಲ್ಲಿ ಇವರು ಪ್ರಕಟಿಸಿದ ಪುಸ್ತಕದ ಬೆಲೆ ೨ ರೂಪಾಯಿ ೮ ಪೈಸೆಗೆ ದೊರೆಯುವಂತೆ ಓರಿಯಂಟಲ್ ರಿಸರ್ಚ್ ಇನ್‌ಸ್ಟಿಟ್ಯೂಟ್ ಪಬ್ಲಿಕೇಶನ್ಸ್‌ನಿಂದ ಮುದ್ರಿಸಲಾಗಿರುವುದನ್ನು ಗಮನಿಸಬಹುದು.

ಇವರ ಉದ್ಯೋಗಪರ್ವವು ಹನ್ನೊಂದು ಸಂಧಿ ೬೬೯ ಪದ್ಯಗಳನ್ನು ಒಳಗೊಂಡಿದೆ. ಸಂಪಾದನಾ ಕಾರ್ಯದಲ್ಲಿ ಕಂಡು ಬಂದ (ಉದ್ಯೋಗಪರ್ವದಲ್ಲಿ ಎಲ್ಲ ಪ್ರತಿಗಳಲ್ಲಿಯೂ ಇಲ್ಲದ ಮೂಲಗ್ರಂಥಕ್ಕೆ ಸೇರಿದ) ಹೆಚ್ಚಿನ ಪದ್ಯಗಳನ್ನು ಸಂಧಿಗಳಿಗೆ ಅನುಗುಣವಾಗಿ ಕೊನೆಯಲ್ಲಿ ನೀಡಿದ್ದಾರೆ. ಭಾರತ ನಿಘಂಟುವಿನಲ್ಲಿರುವ ಪದ್ಯಗಳನ್ನು ಹಾಗೂ ಭಾರತ ನಿಘಂಟಿನ ಪದಗಳನ್ನು ಅಕಾರಾದಿಯಾಗಿ ನೀಡಿ ಸಂಪಾದಿಸಿರುವುದು ಮುಖ್ಯವಾದ ಅಂಶವಾಗಿದೆ.

**ಉದಾಹರಣೆ :**

೧. ಮದುವೆಗೋಸುಗ ಬಂದೆವಾವಿಂ
[೧]ದಿದಱ ಮೇಲಣ ರಾಜ[೧]ಕಾರ್ಯದ
ಹದನ [೨]ನೆಲ್ಲವನಱುದು ಕರಸಿದಡಾವು ಬಹೆವೀಗ[೨]।
ಹದುಳ ವಿಹುದೆಂದಸುರರಿಪು ಕರು
ಣದಲಿ ಕುಂತೀಸುತರನಾ ದ್ರೌ
ಪದಿಯನಭಿಮನ್ಯುವ ಸುಭದ್ರೆಯ [೩]ಹರಸಿ[೩] ಬೀಳ್ಕೊಂಡ।।

೧. ನಿದರ ಮೇಲೆ ನಾದ ಎಂದು ಗ ಪ್ರತಿಯಲ್ಲಿದೆ.
ನಿದರಮೇಲಿನ್ನಾದ ಎಂದು ಝ, ಟ, ದ, ಪ, ರ ಪ್ರತಿಗಳಲ್ಲಿದೆ.
೨. ನಱುದಟ್ಟಿದರೆ ಬಹೆವಾವು ಕರಸಿದರೆ ಎಂದು ಕ, ಮ ಪ್ರತಿಗಳಲ್ಲಿದೆ.
ನಱುದಟ್ಟುವುದು ಬಹೆವಾವ್ ಸಾಕದನ್ನಬರೆ ಎಂದು ಗ ಪ್ರತಿಯಲ್ಲಿದೆ.
ನಱುಹುವುದಟ್ಟಿದರೆ ಬಾಹೆವಾವು ವಹಿಲದಲಿ ಎಂದು ಟ, ದ, ಡ, ಪ, ಯ ಪ್ರತಿಗಳಲ್ಲಿದೆ.
೩. ಕರಸಿ ಎಂದು ಕ, ಠ, ನ, ಮ ಪ್ರತಿಗಳಲ್ಲಿದೆ.

೨. ಎನಲು ನಕ್ಕನು ದ್ರುಪದನಿದುನ
ಮ್ಮನುಮತವು ಕಾಳಗದೊಳಲಗಿನ
ಮೊನೆಯೊಳಲ್ಲದೆ ಮಹಿಯ [೧]ಕೊ[೧]ಡುವನೆ ಕೌರವೇಶ್ವರನು।
ವಿನುತಸಾತ್ಯಕಿ ಕೇಳು [೨]ಮತವನು[೨]
ಜನಪ [೩]ನಲ್ಲಿಗೆವೊಬ್ಬ[೩] ದೂತನ
ವಿನಯದಲಿ ಕಳುಹುವುದು [೪]ಸಾಮವ ಬಳಪ್[೪] ಬಹುದೆಂದ।।

೧. ಬಿ ಎಂದು ಖ, ಗಾ, ಚ, ನ ಪ್ರತಿಗಳಲ್ಲಿದೆ.
೨. ನೆಲೆಯನು ಎಂದು ಗಾ, ಚ, ನ ಪ್ರತಿಗಳಲ್ಲಿದೆ.
೩. ರನ್ನಬರೊಬ್ಬ ಎಂದು ಕ, ಖ, ಠ, ಡ, ಮ ಪ್ರತಿಗಳಲ್ಲಿದೆ.
೪. ಬೇದವನಱುಯ ಎಂದು ಖ, ಗಾ, ಠ, ನ ಪ್ರತಿಗಳಲ್ಲಿದೆ.

---

೧. ಎಸ್. ಎನ್. ಕೃಷ್ಣಜೋಯಿಸ್‌ರ ಸಂಪಾದನೆಯ ಉದ್ಯೋಗಪರ್ವದ ಒಂದನೆಯ ಸಂಧಿಯ ೧೨ನೆಯ ಪದ್ಯ, ಪುಟಸಂಖ್ಯೆ, ೪.
೨. ಪದ್ಯ ೧೦, ಪುಟಸಂಖ್ಯೆ, ೩.

೩. ವೀರ ಪಾಂಡವರ ವರಸುಕು
ಮಾರವರ್ಗದ ಮಂಡವಿಗೆ ಗೂ
ಡಾರಗಳನೊಹೊಯ್ದು [೧]ಬಿಗಿದರು ತಳಿಯ ದಡ್ಡಿಗಳ್[೧]।
[೨]ವಾರಣದ ಶಾಲೆ[೨]ಗಳು ಸುತ್ತಲು
ಭಾರಿಸಿತು ಪಾಂಚಾಲ [೩]ಮತ್ಸ್ಯರ್[೩]
ಭೂರಿಬಲ ಬಿಟ್ಟುದು ಮಹೀಶ[೪]ನ ಗುಡಿಯ ಬಳಿಸಿನಲಿ[೪]॥

೧. ತಳಿದವು ಬಿಗಿದ ದಟ್ಟಿಗಳು ಎಂದು ಕ ಪ್ರತಿಯಲ್ಲಿದೆ.
ಬಿಗಿದವು ತಳಿಯ ತಟ್ಟಿಗಳು ಎಂದು ಗ, ಚ, ಡ, ಪ ಪ್ರತಿಗಳಲ್ಲಿದೆ.

೨. ತೋರಣದ ಸಾಲು ಎಂದು ಕ ಪ್ರತಿಯಲ್ಲಿದೆ.

೩. ಮಗಧರು ಎಂದು ಕ ಪ್ರತಿಯಲ್ಲಿದೆ.

೪. ರ ಗುಡಿಯ ಪಾರ್ಶ್ವದಲಿ ಎಂದು ಟ, ದ ಪ್ರತಿಗಳಲ್ಲಿದೆ.

೪. ನರನಮಗನಭಿಮನ್ಯು ಕುಶಲನು
ವರಸುಭದ್ರಾದೇವಿ ಮೊದಲಾ
ಗಿರಿ[೧]ವೃ[೧] ಬಾಂಧವರೆಲ್ಲ ಜೀವಂತರು ನಿದಾನಿಸಲು।
ಪರಮ ಮಿತ್ರರು [೨]ನ[೨]ಮ್ಮೊಳೊಂದಾ
ದರು ದ್ರುಪದನಕ್ಷೋಣಿ[೩]ಸೇನೆಯ[೩]
ನೆರವು ಬಂ[೪]ದಾದು[೪] ರಾಜಕಾರ್ಯದ [೫]ಬಳಕೆ[೫]ಲೇಸೆಂದ

೧. ಲು ಎಂದು ಖ, ಚ, ಟ, ಣ, ಬ ಪ್ರತಿಗಳಲ್ಲಿದೆ.

೨. ತ ಎಂದು ಖ, ಗ, ಚ, ಟ, ಣ, ಪ ಪ್ರತಿಗಳಲ್ಲಿದೆ.

೩. ಯಿವರಿಗೆ ಎಂದು ಗ, ಚ, ಡ, ಬ ಪ್ರತಿಗಳಲ್ಲಿದೆ.
ಸೇನೆಯು ಎಂದು ಠ, ಣ, ಪ ಪ್ರತಿಗಳಲ್ಲಿದೆ.

---

೩. ಎಸ್. ಎನ್. ಕೃಷ್ಣಜೋಯಿಸ್‌ರ ಸಂಪಾದನೆಯ ಉದ್ಯೋಗಪರ್ವದ ೧೧ನೆಯ ಸಂಧಿ, ೪೬ನೆಯ ಪದ್ಯ, ಪುಟಸಂಖ್ಯೆ, ೧೭೬.

೪. ಎಸ್. ಎನ್. ಕೃಷ್ಣಜೋಯಿಸ್‌ರ ಸಂಪಾದನೆಯ ಉದ್ಯೋಗಪರ್ವದ ೮ನೆಯ ಸಂಧಿಯ ೨೧ನೆಯ ಪದ್ಯ, ಪುಟಸಂಖ್ಯೆ, ೧೧೮.

೪. ದನು ಎಂದು ಕ, ಗ, ಚ, ಮ ಪ್ರತಿಗಳಲ್ಲಿದೆ.

೫. ಹದನು ಎಂದು ಕ, ಮ ಪ್ರತಿಗಳಲ್ಲಿದೆ.

೫. ಕೇಳು ಜನಮೇಜಯ ಧರಿತ್ರೀ
ಪಾಲ ಬೀಡಿನ [೧]ರಕ್ಷೆ ಬಲಿ[೧]ದುದು
[೨]ಪಾಳೆಯದ[೨] ಬಲುಹೊದಕೆ ಹೊಱವಳಯದಲಿ ಕಲುಕೋಟೆ
ಮೇ[೩]ಲೆ ಪಡಿಯಗಳಾ[೩]ಶ್ರಯಕೆ ಮುಳು
ವೇಲಿ ದೀಹದಸಿಂಹ ಶರಭ
ವ್ಯಾಳ ಶಾರ್ದೂಲಾವಳಿಯ ಸುಯ್ದಾನವೊಪ್ಪಿದುದು.

೧. ತಕ್ಕೆ ಬಿಗಿ ಎಂದು ಗಾಮತ್ತು ಬ ಪ್ರತಿಗಳಲ್ಲಿದೆ.

೨. ಮೇಳವದ ಎಂದು ಖ, ಚ, ಟ, ಡ, ಪ, ರ, ಪ್ರತಿಗಳಲ್ಲಿದೆ.

೩. ಲುಗಾವಲಿನಾ ಎಂದು ಖ ಪ್ರತಿಯಲ್ಲಿದೆ.

* * * * *

---

೫. ಎಸ್. ಎನ್. ಕೃಷ್ಣಜೋಯಿಸ್‌ರ ಸಂಪಾದನೆಯ ಉದ್ಯೋಗಪರ್ವದ ೧೧ನೆಯ ಸಂಧಿಯ ೪೭ನೆಯ ಪದ್ಯ, ಪುಟಸಂಖ್ಯೆ, ೧೭೬.

# ಅಧ್ಯಾಯ - ೪

## ವಿವಿಧ ಪರಿಷ್ಕೃತ ಆವೃತ್ತಿಗಳ ಸಮೀಕ್ಷೆ

ಎಸ್.ಎನ್. ಕೃಷ್ಣಜೋಯಿಸ್ ಅವರು ಕರ್ಣಾಟಕ ಮಹಾಭಾರತದ 'ಉದ್ಯೋಗಪರ್ವ'ದ ಪರಿಷ್ಕರಣ ಕಾರ್ಯಕ್ಕೆ ಒಟ್ಟು ೧೮ ಪ್ರತಿಗಳನ್ನು ಪರಿಶೀಲಿಸಿ ಅವುಗಳ ಸಹಾಯದಿಂದ ಉದ್ಯೋಗಪರ್ವವನ್ನು ಸಂಪಾದಿಸಿದ್ದಾರೆ.

- ಮೊದಲ ಮುದ್ರಣಕ್ಕೆ ಶಾ.ಶ.೧೭೬೩ರ ಕೆ.೭೦ನೆಯ ಪ್ರತಿಯನ್ನು ಮುಖ್ಯವಾಗಿಸಿಕೊಂಡು ಪರಿಷ್ಕರಿಸಿದ್ದಾರೆ.
- ಕ್ರಿ.ಶ.೧೫೫೪ರ ಪ್ರತಿಯಾದ ಕೆ. ೨೦೫ನೆ ನಂಬರಿನ ಪ್ರತಿಯೇ ನಮ್ಮಲ್ಲಿರುವ ಭಾರತದ ಪ್ರತಿಗಳಲ್ಲಿ ಪ್ರಾಚೀನವಾದುದು. ಈ ಪ್ರತಿಯಲ್ಲಿ ಶಕಟರೇಫವಿದೆ. ಇದರ ಪ್ರಯೋಗ ಸರಿಯಿದ್ದು ಪ್ರಾಚೀನವಾದ ಇದನ್ನೇ ಮೂಲಪ್ರತಿಯನ್ನಾಗಿ ಸ್ವೀಕರಿಸಿರುವುದರಿಂದ ಜೋಯಿಸ್ ಅವರು ಇದನ್ನು ಆಧಾರವಾಗಿಟ್ಟುಕೊಂಡು ಉದ್ಯೋಗಪರ್ವವನ್ನು ಸಂಪಾದಿಸಿರುವುದು ಪ್ರಮುಖವಾದ ಅಂಶವಾಗಿದೆ.

ಎಸ್.ಎನ್. ಕೃಷ್ಣ ಜೋಯಿಸ್ ಅವರು ಪರಿಷ್ಕರಣಕಾರ್ಯಕ್ಕೆ ಆಯ್ಕೆ ಮಾಡಿಕೊಂಡಿರುವ ೧೮ ಪ್ರತಿಗಳು ಈ ಕೆಳಗಿನಂತಿವೆ.

- **'ಖ'** ಪ್ರತಿ - ಗ್ರಂಥ ಪೂರ್ಣವಾಗಿದೆ.

**'ನಕುಲೆ'** ಎನ್ನುವುದಕ್ಕೆ **'ಲಕುಳ'** ಎಂದೂ.

'ದವು' ಎನ್ನುವುದಕ್ಕೆ 'ದೂ'

'ಯ' ಕಾರಕ್ಕೆ ಒತ್ತಕ್ಷರದ ಬದಲಿಗೆ ಅದರ ಹಿಂದಿರುವ ಅಕ್ಷರಕ್ಕೆ 'ೖ' ಬಳಕೆಯಾಗಿದ್ದು, ಶುದ್ಧಪಾಠಗಳೇ ದೊರೆಯುತ್ತವೆ. ಉದಾಹರಣೆ, ಬಳಿಕಿನ್ನಾ ಎಂಬ ಪದ ಪ್ರತಿಯಲ್ಲಿ ಬಳೀಕೇನಾ ಎಂದಿದೆ.

ನಲ್ಲಿಗೆವೊಬ್ಬ ಎಂಬ ಪದ ಖ ಪ್ರತಿಯಲ್ಲಿ ರನ್ನಬರೊಬ್ಬ ಎಂದಿದೆ.

ನನ ಎಂಬ ಪದ ಖ ಪ್ರತಿಯಲ್ಲಿ ರಣ ಎಂದಿದೆ.

- **'ಗ'** ಪ್ರತಿ - ಗ್ರಂಥಪೂರ್ಣಗೊಂಡಿದೆ.

**'ಹ'** ಎನ್ನುವ ಕಡೆಯಲ್ಲೆಲ್ಲಾ 'ಅ' ಎಂದೂ

ಉದ್ಯೋಗಪರ್ವದ ೩ನೇ ಸಂಧಿಯಲ್ಲಿ ೧೧ ಪದ್ಯಗಳಿಗೆ ಮೂಲಭೂತವಾದ ೧೧ ಸಂಸ್ಕೃತ ಶ್ಲೋಕಗಳನ್ನೂ, ೪ನೇ ಸಂಧಿಯಲ್ಲಿ ೧೩ ಶ್ಲೋಕಗಳನ್ನೂ ಈ ಪ್ರತಿಯಲ್ಲಿ ಕಾಣಬಹುದು. **ಉದಾಹರಣೆ: ಜೋತಿ** ಎಂಬ ಶಬ್ದ ಗ ಪ್ರತಿಯಲ್ಲಿ **ತೇಜ** ಎಂದಿದೆ.

**ವಾವಾರಣ ಶರಸಂಗತಿಯ** ಶಬ್ದ **ವಾವಾರಣರಸಸಂಗತಿ** ಎಂದಿದೆ.

**ನಾವೆನುತ** ಎಂಬ ಶಬ್ದ ಗ ಪ್ರತಿಯಲ್ಲಿ **ನಾವಿಂದು** ಎಂದಿದೆ.

**ಳೊಡನೊಡನೆ** ಎಂಬ ಶಬ್ದ ಗ ಪ್ರತಿಯಲ್ಲಿ **ಳಡಿಗಡಿಗೆ** ಎಂದಿದೆ.

೩ನೆಯ ಸಂಧಿಯಲ್ಲಿ ೨೪ ಪದ್ಯಗಳು

೪ನೆಯ ಸಂಧಿಯಲ್ಲಿ ೧೧ ಪದ್ಯಗಳು

೮ನೆಯ ಸಂಧಿಯಲ್ಲಿ ೨೦ ಪದ್ಯಗಳು

೯ನೆಯ ಸಂಧಿಯಲ್ಲಿ ೩೪ ಪದ್ಯಗಳು

೧೧ನೆಯ ಸಂಧಿಯಲ್ಲಿ ೧೬ ಪದ್ಯಗಳು ಹೆಚ್ಚಾಗಿವೆ.

- **'ಚ'** ಪ್ರತಿ - ಪ್ರಾರಂಭದ ೧೪೯ ಓಲೆಗಳಿಲ್ಲ. ೧೯೦ನೇ ಪದ್ಯದಿಂದ ಉದ್ಯೋಗಪರ್ವದಿಂದ ಗದಾಪರ್ವ ಪೂರ್ತಿ ಗ್ರಂಥವಿದೆ. ಈ ಪ್ರತಿಯಲ್ಲಿ ಹೆಚ್ಚು ಪಾಠಾಂತರಗಳಿವೆ.

ಉದಾಹರಣೆ : **ವೈಹಾಳಿಯನು ಹೊಱವಂಟರನಿಬರು ದೈತ್ಯರಿಪುಸಹಿತ**

ಎಂಬ ಸಾಲು ಚ ಪ್ರತಿಯಲ್ಲಿ

**ದೆಖ್ಖಾಳವನು ನೋಡಿದರು ಹೊರಟರು** ಎಂದಿದೆ.

ದಿನದಿನದಲೊದಗಿಸಿದ ದುಷ್ಕೃತ ಬೆನ್ನ ಬಿಡದಿಹುದು

ಅನವರತ ನೀನೊಲಿದು ಮಾಡಿದ

ವಿನಯಧರ್ಮ ಪರೋಪಕಾರವು

ನಿನಗೆ ಬೆಂಬಲವಾಗಿಹುದು ಧೃತರಾಷ್ಟ್ರ ಕೇಳೆಂದ

ಈ ಪದ್ಯ

ದಿನದಿನದಿ ಗಳಿಸಿರ್ದ ಧನವಾದಡೆಯು ಬೆಂಬಳಿಯ
ಜಿನುಗಿನಲಿ ಬರಲಱುಯವಿಂತೀ
ಮನುಜರಿಗೆ ತಾ ಮಾಡಿದ್ದುನ್ನತ
ಪರಮಸುಕೃತವೆ ತನಗೆ ಬೆಂಬಲವೆಂದನಾ ವಿದುರ ಎಂದಿದೆ.

೪ನೆಯ ಸಂಧಿಯಲ್ಲಿ ೪ ಪದ್ಯಗಳು

೫ನೆಯ ಸಂಧಿಯಲ್ಲಿ ೧ ಪದ್ಯಗಳು

೮ನೆಯ ಸಂಧಿಯಲ್ಲಿ ೨೩ ಪದ್ಯಗಳು

೯ನೆಯ ಸಂಧಿಯಲ್ಲಿ ೨೮ ಪದ್ಯಗಳು

ಹತ್ತನೆಯ ಸಂಧಿ ೩೧ ಪದ್ಯವಾದ ಮೇಲೆ ಎಂಟು ಹೆಚ್ಚಾಗಿವೆ.

- **'ಜ'** ಪ್ರತಿ - ಪೂರ್ಣಗೊಂಡಿಲ್ಲ. ಪ್ರಾರಂಭದಿಂದ ಉದ್ಯೋಗಪರ್ವ ಸಂಧಿ ೪ರಲ್ಲಿ ೪೩ ಪದ್ಯಗಳಿವೆ.

  ಉದಾಹರಣೆ **ಶೌಚೋ** ಎಂಬ ಶಬ್ದ 'ಜ' ಪ್ರತಿಯಲ್ಲಿ **ಶ್ರೋತೋ** ಎಂದಿದೆ. **ನಿಷ್ಕಳಿತರೋಷಕನ** ಎಂಬ ಶಬ್ದ 'ಜ' ಪ್ರತಿಯಲ್ಲಿ ನಿಶ್ಚಲ ನಿರೋಧನ ಎಂದಿದೆ.

  ೩ನೆಯ ಸಂಧಿಯಲ್ಲಿ ೧೧ ಹೆಚ್ಚಿನ ಪದ್ಯಗಳಿವೆ.

  ೪ನೆಯ ಸಂಧಿಯಲ್ಲಿ ೩ ಹೆಚ್ಚಿನ ಪದ್ಯಗಳಿವೆ.

- **'ಝ'** ಪ್ರತಿ - ಉದ್ಯೋಗಪರ್ವ ಮಾತ್ರವಿದ್ದು ಮಧ್ಯೆ - ಮಧ್ಯೆ ಗ್ರಂಥಪಾತವಾಗಿದೆ.

  ಉದಾಹರಣೆ : **ನಾವೆನುತ** ಎಂಬ ಪದ ಝ ಪ್ರತಿಯಲ್ಲಿ ನಡೆಯೆನುತ ಎಂದಿದೆ.

  ದೃಶೆಯರು ಎಂಬ ಪದ ಝ ಪ್ರತಿಯಲ್ಲಿ ದೃಷ್ಟಿಯ ಎಂದಿದೆ. ಎಂಟನೆಯ ಸಂಧಿಯ ೪೯ ನೆಯ ಪದ್ಯವು ಝ ಪ್ರತಿಯಲ್ಲಿ ಇಲ್ಲ.

- **'ಟ'** ಪ್ರತಿ - ಉದ್ಯೋಗ ಪರ್ವದಿಂದ ಗದಾಪರ್ವದ ವರೆಗೆ ಪೂರ್ತಿ ಇದ್ದು,

  **ಚ್ಪ** ಎಂಬಲ್ಲಿ ತ್ಸ ಎಂದಿದೆ.

  **ಹಾಯಿದಳು** ಎಂಬಲ್ಲಿ ಹಾಯ್ದಪಳೊ ಎಂದಿದೆ.

  **ತನ್ನ** ಎಂಬಲ್ಲಿ ನಮ್ಮ ಎಂದಿದೆ.

- **'ನ'** ಪ್ರತಿ - ಆದಿಪರ್ವದಿಂದ ಗದಾಪರ್ವದ ೯ನೆಯ ಸಂಧಿ ೪೧ನೇ ಪದ್ಯದವರೆಗೆ ಇದೆ.

ಈ ಪ್ರತಿಯ ವಿಶೇಷವೆಂದರೆ ಆದಿಪರ್ವ ಪೂರ್ತಿ ಪ್ರತಿಸಂಧಿಯ ಆರಂಭದಲ್ಲಿ ಹಾಡಲು ರಾಗಗಳನ್ನು ಬರೆದಿರುವುದು ಈ ಪ್ರತಿಯ ವೈಶಿಷ್ಟ್ಯವಾಗಿದೆ. ಶಕಟರೇಫ ಬಳಕೆಯಾಗಿದ್ದರೂ ಪ್ರಯೋಗ ಸರಿಯಿಲ್ಲ.

ಸುಮಾರು ೬ಂಕ್ಕೂ ಹೆಚ್ಚು ಹೆಚ್ಚಿನ ಪದ್ಯಗಳನ್ನು ಈ ಪ್ರತಿ ಒಳಗೊಂಡಿದೆ.

**ಉದಾಹರಣೆ :**

**ಮತವನು ಎಂಬುದು ನೆಲೆಯನು ಎಂದಿದೆ.**

**ಹರಸಿ ಎಂಬುದು ಕರಸಿ ಎಂದಿದೆ.**

**ನೇಕುಲೀನನು ಎಂಬುದು ನವನೆ ಕುಲಿಜನು ಎಂದಿದೆ.**

- **'ಪ'** ಪ್ರತಿ - ಆದಿಪರ್ವದಿಂದ ಕರ್ಣಪರ್ವದ ೨ ನೇ ಸಂಧಿ ಇದೆ.

ಪ್ರತಿ ಪರ್ವದ ಕೊನೆಯಲ್ಲಿ ಪ್ರತಿಸಮಾನಂ ಬರೆದೆಂ ಎಂಬಿರುವುದು ಈ ಪ್ರತಿಯ ವಿಶೇಷ. ಕೆಲವು ಹೆಚ್ಚಿನ ಪದ್ಯಗಳನ್ನು ಒಳಗೊಂಡಿದೆ.

**ಉದಾಹರಣೆ : ಸಲಹುವನೆಂದು ಬೋಧಿಸಿದ ಎಂಬುದು ಧೃತರಾಷ್ಟ್ರನನು ಬೋಧಿಸಿದ ಎಂದಿದೆ.**

**ದೊಳಗೋಲಾ ಎಂಬುದು ದಲಿನಲಿದಾ ಎಂದಿದೆ.**

**ಯಲಿ ಜನಿಸಿದ ರನೀ ಎಂಬುದು. ಜನನಿಗೆ ಜನಿಸಿದರ ಎಂದಿದೆ.**

- **'ಬ'** ಪ್ರತಿ - ಪ್ರಾರಂಭದ ಎರಡು ಓಲೆಗಳಲ್ಲಿ. ಆದಿಪರ್ವದಿಂದ ದ್ರೋಣಪರ್ವ ೨೪ ಸಂಧಿಪೂರ್ತಿ ಇದೆ. ಪ್ರಾಚೀನವಾಗಿದ್ದು ಶಕಟರೇಫ ಬಳಕೆಯಾಗಿದೆ. ಕೆಲವು ಹೆಚ್ಚಿನ ಪದ್ಯಗಳಿವೆ.

**ಉದಾಹರಣೆ : ಸೇನೆಯ ಎಂಬುದು ಯಿವರಿಗೆ ಎಂದಿದೆ.**

ಗಳ ಎಂಬುದು ಯರ ಎಂದಿದೆ.

ತಂದು ಸಮ್ಮದ ಎಂಬುದು ತೆಗೆದು ಸುನ್ನುತ ಎಂದಿದೆ.

೮ನೆ ಸಂಧಿಯ ೪೫, ೪೬, ೪೮, ೪೯, ೫೦, ೫೭, ೫೮, ೫೯, ೭೧, ೭೨, ೭೩, ೭೪ ಕೆಲವು ಪದ್ಯಗಳು ಬ ಪ್ರತಿಯಲ್ಲಿಲ್ಲ.

- **'ಮ'** ಪ್ರತಿ - ಆದಿ ಪರ್ವದಿಂದ ಕರ್ಣಪರ್ವದ ೨೪ ನೇ ಸಂಧಿ ಇದೆ. ಇದು ಕ ಪ್ರತಿಯನ್ನು ಅಕ್ಷರಶಃ ಹೋಲುತ್ತದೆ.

ಲನೆ ಸಂಧಿಯಲ್ಲಿ ಒಂದು ಪದ್ಯ ಹೆಚ್ಚಿರುವುದನ್ನು ಗುರುತಿಸಬಹುದು. **ಉದಾಹರಣೆ : ಮತಿ** ಎಂಬುದು **ನುಡಿ** ಎಂದಿದೆ.

**ಕುಳಿತೆ** ಎಂಬುದು **ಬಲದ** ಎಂದಿದೆ. ಕ ಪ್ರತಿಯಲ್ಲಿಯೂ ಇದೇ ರೀತಿ ಇದೆ.

**ಬಳಿವಿಡಿದು ಭೂ ಭುಜರ** ಎಂಬುದು **ಬಲಿಹಿನಲಿ ಭೂ ಸುರರ** ಎಂದಿದೆ.

ಓನೆಯ ಸಂಧಿಯಲ್ಲಿ ೧೧ ಪದ್ಯಗಳು

೪ನೆಯ ಸಂಧಿಯಲ್ಲಿ ೩ ಪದ್ಯಗಳು

ಲನೆಯ ಸಂಧಿಯಲ್ಲಿ ೩ ಪದ್ಯಗಳು

೯ನೆಯ ಸಂಧಿಯಲ್ಲಿ ೩೦ ಪದ್ಯಗಳು ಹೆಚ್ಚಿನ ಪದ್ಯಗಳಿವೆ.

- **'ದ'** ಪ್ರತಿ - ಪ್ರತಿಕಾರನ ಕಾಲ ಪ್ರತಿಕಾರನ ಹೆಸರು ತಿಳಿದು ಬರುವುದಿಲ್ಲ. ವಿರಾಟಪರ್ವದಿಂದ ಗದಾಪರ್ವ ಪೂರ್ತಿ ಇದೆ.

ಕೆಲವು ಹೆಚ್ಚಿನ ಪದ್ಯಗಳನ್ನು ಒಳಗೊಂಡಿದೆ.

**ಉದಾಹರಣೆ : ತರುಗಳನು** ಎಂಬುದು **ತನುಗಳದೆ** ಎಂದಿದೆ.

**ವಾಳು** ಎಂಬುದು **ಮಾಡು** ಎಂದಿದೆ.

**ಳೆವನಿಂದ** ಎಂಬುದು **ಳವನೀ** ಎಂದಿದೆ.

- **'ಠ'** ಪ್ರತಿ - ಹುಳುಹಿಡಿದು ಶಿಥಿಲಗೊಂಡು ಉದ್ಯೋಗಪರ್ವದಿಂದ ಗ್ರಂಥವು ಪ್ರಾರಂಭವಾಗಿ ಕರ್ಣಪರ್ವ ೨೫ನೇ ಸಂಧಿಯ ೧೫ನೇ ಪದ್ಯವಿದೆ.

ಶಕಟರೇಫ ಪ್ರಯೋಗವಿದ್ದರೂ ಸರಿಯಾಗಿಲ್ಲ.

ಕೆಲವು ಹೆಚ್ಚಿನ ಪದ್ಯಗಳನ್ನು ಈ ಪ್ರತಿಯಲ್ಲಿಯೂ ಕಾಣಬಹುದು.

ಉದಾಹರಣೆ : **ಹುದಿವರು ಮಕ್ಕಳು** ಎಂಬುದು **ಹರಿವರು** ಎಂದಿದೆ.

**ಕುಂತೀತನಯ** ಎಂಬುದು **ಪಾಂಡುಕುಮಾರ** ಎಂದಿದೆ.

- **'ಡ'** ಪ್ರತಿ - ಆದಿ ಪರ್ವದಿಂದ ಉದ್ಯೋಗಪರ್ವ ಪೂರ್ತಿ ಇದೆ.

  ಈ ಪ್ರತಿಯು ಕೆಲವು ಹೆಚ್ಚಿನ ಪದ್ಯಗಳನ್ನು ಒಳಗೊಂಡಿದೆ.

  ಉದಾಹರಣೆ : **ನಿಸದತಿಬಲನ** ಎಂಬುದು **ನಿಸದತಿಧನಿಕ** ಎಂದಿದೆ.

  **ವೆಂಬಿ** ಎಂಬುದು **ವೆನಿಪ** ಎಂದಿದೆ.

  **ಪಾಲಿ** ಎಂಬುದು **ರಕ್ಷಿ** ಎಂದಿದೆ.

- **'ಣ'** ಪ್ರತಿ - ಅಕ್ಷರ ಗುಂಡಾಗಿದ್ದು ಬರವಣಿಗೆಯು ಸ್ಫುಟವಾಗಿದ್ದು ಆದಿಪರ್ವದಿಂದ ಉದ್ಯೋಗಪರ್ವ ಪೂರ್ತಿ ಇದೆ.

  ೮ನೆಯ ಸಂಧಿಯ ೪೯ನೆಯ ಪದ್ಯ 'ಣ' ಪ್ರತಿಯಲ್ಲಿಲ್ಲ.

  ಉದಾಹರಣೆ : **ಹೊಳೆವಧರ ಪಿಂಗಳವಿಲೋಚ** ಎಂಬುದು **ಕೆಂಪಿನಧರವ ಚಲಿತ ನಯನವ** ಎಂದಿದೆ.

  **ಬೆಸಸೆನು** ಎಂಬುದು **ಜೀಯೆನು** ಎಂದಿದೆ.

  ಕೆಲವು ಹೆಚ್ಚಿನ ಪದ್ಯಗಳನ್ನು ಈ ಪ್ರತಿಯು ಒಳಗೊಂಡಿದೆ.

- **'ತ'** ಪ್ರತಿ - ಆದಿಪರ್ವದಿಂದ ಕರ್ಣಪರ್ವದ ೮ ಸಂಧಿಗಳನ್ನು ಒಳಗೊಂಡಿರುವ ಇದು ಕೆಲವು ಹೆಚ್ಚಿನ ಪದ್ಯಗಳನ್ನು ಹೊಂದಿದೆ. ೮ನೆ ಸಂಧಿಯ ೪೫, ೪೯, ೫೦ನೆಯ ಪದ್ಯ ಈ ಪ್ರತಿಯಲ್ಲಿಲ್ಲ.

  ಉದಾಹರಣೆ : **ಮಂತ್ರಿಗಳು ವೈದ್ಯರು** ಎಂಬುದು **ಮಂತ್ರಿಗಳು ವೃದ್ಧರು** ಎಂದಿದೆ.

  **ಡಾಯ್ಧದ** ಎಂಬುದು **ದಾಡೆಯ** ಎಂದಿದೆ.

  **ದಬಲದ ಮಹಾಮಹೀಶ್ವರರ** ಎಂಬುದು **ಬಲದಲಿಹ ಮಂಡಲೇಶ್ವರ** ಎಂದಿದೆ.

- **'ಯ'** ಪ್ರತಿ - ಗ್ರಂಥವೂ ಪೂರ್ಣ ಹಾಗೂ ಅಕ್ಷರಗಳು ಸ್ಫುಟವಾಗಿದೆ.

  ಉದಾಹರಣೆ : **ಕೈ ಮುಗಿದು** ಎಂಬುದು **ವಿನಯದಲಿ** ಎಂದಿದೆ.

- **'ರ'** ಪ್ರತಿ - ಶಕಟರೇಫವನ್ನು ಬಳಸಲಾಗಿರುವ ಈ ಪ್ರತಿಯು ಪೂರ್ಣವಾಗಿದ್ದು ಸ್ಫುಟವಾದ ಅಕ್ಷರಗಳನ್ನು ಒಳಗೊಂಡಿದೆ.

  **ಉದಾಹರಣೆ : ಕೈಮುಗಿದು** ಎಂಬ ಪದ **ವಿನಯದಲಿ** ಎಂದಿದೆ. ಕೆಲವು ಪದಗಳು. 'ಯ' ಪ್ರತಿಯನ್ನೇ ಹೋಲುತ್ತದೆ. ಎಂಬ ಎಂಬುದು ಅಂದ ಎಂದಿದೆ.

'ಕ' ಪ್ರತಿ - ಪರ್ವಾರಂಭ ಮತ್ತು ಪರ್ವಾಂತ್ಯಗಳಲ್ಲಿ ಕೆಲವು ಚಿತ್ರಗಳನ್ನು ಒಳಗೊಂಡಿದೆ. ಇದು ಶಾ.ಶ.೧೪೭೬ರಲ್ಲಿ ಪ್ರತಿಯಾದುದು. ಕ್ರಿ.ಶ೧೫೫೪ನೇ ಆಗಸ್ಟ್ ಮಾಹೆ ೧೬ನೇ ತಾ|| ಬುಧವಾರ ಇದರ ಬರವಣಿಗೆ ಮುಗಿದಿದೆ ಎಂದಿದೆ. ಓಲೆಗಳನ್ನು ಸೇರಿಸಿಕಟ್ಟಲು ಪ್ರತಿ ಓಲೆಯಲ್ಲೂ ಮಾಡಿರುವ ರಂಧ್ರಗಳಿಗೆ ಸಣ್ಣಸಣ್ಣ ಬೆಳ್ಳಿಯ ಕಟ್ಟುಗಳನ್ನು ಹಾಕಿರುವುದು ಈ ಪ್ರತಿಯ ವೈಶಿಷ್ಟ್ಯ.

'ಥ' ಅಕ್ಷರಕ್ಕೆ 'ಥ' ಒತ್ತನ್ನು (ಥ್ಥ) ಕೊಡುವುದಕ್ಕೆ ಬದಲಾಗಿ

'ಆ' ಎಂದು ಬರೆದಿರುವುದು (ಥ್ಆ) ಈ ಪ್ರತಿಯಲ್ಲಿ ಕಂಡುಬರುವ ಅಕ್ಷರವೈಚಿತ್ರ್ಯ.

ಈ ೧೮ ಪ್ರತಿಗಳಲ್ಲಿ ಕ, ಖ, ಚ, ಝ, ಠ, ಣ, ಥ, ನ, ಮ, ಬ ಪ್ರತಿಗಳನ್ನು ಬಿಟ್ಟು ಉಳಿದ ಪ್ರತಿಗಳ ಪಾಠಗಳು 'ಗ' ಪ್ರತಿಯನ್ನೇ ಸಾಮಾನ್ಯವಾಗಿ ಹೋಲುವುದು. ಈ ಎಲ್ಲಾ ಪ್ರತಿಗಳಲ್ಲೂ ಕಂಡುಬರುವ ಪಾಠಕ್ಕೆ 'ಗಾ' ಎಂದು ಸಂಕೇತ ನೀಡಿದ್ದಾರೆ.

ಎಸ್.ಎನ್. ಕೃಷ್ಣಜೋಯಿಸರು ಉದ್ಯೋಗಪರ್ವದ ಸಂಪಾದನೆಗೆ ಮುಖ್ಯವಾಗಿ 'ಕ' ಪ್ರತಿಯನ್ನು ಹಾಗೂ ಮೈಸೂರು ಅರಮನೆ ಸರಸ್ವತೀ ಭಂಡಾರದ ಮೂರು ಮಾತೃಕೆಗಳನ್ನು ಆಧಾರವಾಗಿಟ್ಟುಕೊಂಡು ಸಂಪಾದಿಸಿದ್ದಾರೆ.

ಕೆ. ೩೬೬ (ಕ)

ಕೆ. ಎ ೨೫೩ (ಖ)

ಕೆ. ಕೆ. ಎ ೨೯೦ (ಗ) ಮತ್ತು

ಕಿಟಲ್ ನಿಘಂಟು (ಚ)

ಈ ಮೇಲಿನ ಎಲ್ಲಾ ಪ್ರತಿಗಳನ್ನು ಪರಿಶೀಲಿಸಿ ಸಂಪಾದಿಸಿರುವುದು ಗಮನಾರ್ಹ ಸಂಗತಿ.

ಇವರ ಸಂಪಾದನಾ ಕೃತಿಯ ಮತ್ತೊಂದು ಪ್ರಮುಖವಾದ ಅಂಶವೆಂದರೆ ಉದ್ಯೋಗಪರ್ವದಲ್ಲಿ ಎಲ್ಲಾ ಪ್ರತಿಗಳಲ್ಲಿಯೂ ಇಲ್ಲದ ಮೂಲಗ್ರಂಥಕ್ಕೆ ಸೇರಿರುವ ಇರುವ ಕೆಲವು ಪದ್ಯಗಳನ್ನು ಪರಿಶಿಷ್ಟ ೧ರಲ್ಲಿ ಸಂಧಿಗಳಿಗೆ ಅನುಗುಣವಾಗಿ ಸೇರಿಸಿ ಮುದ್ರಿಸಿದ್ದಾರೆ. ಮತ್ತೆ ಪರಿಶಿಷ್ಟ ೨ರಲ್ಲಿ ಭಾರತ ನಿಘಂಟುವಿನ ಶ್ಲೋಕಗಳನ್ನು (ಪ್ರತಿಯಲ್ಲಿರುವ ಪದ್ಯಗಳು) ಹಾಗೂ ಭಾರತ ನಿಘಂಟಿನ ಪದಗಳ ಅರ್ಥವನ್ನು ಅಕಾರಾದಿಯಾಗಿ ನೀಡಿದ್ದಾರೆ.

ಶಾಸ್ತ್ರೀಯವಾದ ಸಂಪಾದನಾ ಕಾರ್ಯದ ವೈಖರಿಯನ್ನು ಅಮೂಲಾಗ್ರವಾಗಿ ಎಸ್.ಎನ್. ಕೃಷ್ಣಜೋಯಿಸ್‌ರವರ ಉದ್ಯೋಗಪರ್ವದಲ್ಲಿ ಕಾಣಬಹುದು.

## ಒಂದನೆಯ ಸಂಧಿ

ಮಾಲೆಯ [೧]ನಾಂಬುಂದೊಬ್ಬ[೧] ದನುಜೆಯ
ಹಿಳಿ[೨]ದೆವೊದೆದೆವು[೨] ಶಕಟನನು [೩]ತರು
ಗಳನು[೩] ಧೇನುಕ ವತ್ಸನಗಹಯ ವೃಷಭಬುಜಗರನು।
ಬಲುಗಜವ ಮಲ್ಲರನು ಮಾವನ
[೪]ಸೆಳದು[೪] ಮಗಧನ ಬಲವ ಬಱುಕೈ
[೫]ದಳಿಸಿದೆವು[೫] ದಾನವರ [೬]ಹೆಂಡಿರನಾ[೬] ಹವಾಗ್ರದಲಿ॥

೧. ನುಣಿಸಲು ಬಂದ ಎಂದು ಮ ಪ್ರತಿಯಲ್ಲಿದೆ.
೨. ದುಕೊಂಡೆವು ಎಂದು (ಕ, ಮ ಪ್ರತಿಗಳಲ್ಲಿದೆ.)
ದೆಕೊಂಡೆವು ಎಂದು ಚ, ಠ, ದ, ಡ, ಬ ಪ್ರತಿಗಳಲ್ಲಿದೆ.
೩. ತನುಗಳದೆ ಎಂದು ಗ, ಚ, ಟ, ಡ, ದ, ಪ್ರತಿಗಳಲ್ಲಿದೆ.
೪. ನೆಳದು ಎಂದು ಖ, ಗ, ಚ, ಪ, ಬ, ಪ್ರತಿಗಳಲ್ಲಿದೆ.
೫. ದಲಸಿ ಎಂದು ಕ, ಮ ಪ್ರತಿಗಳಲ್ಲಿದೆ.
೬. ಹೆಂಡಿದೆವಾ ಎಂದು ಚ, ಝ, ಠ, ಬ ಪ್ರತಿಗಳಲ್ಲಿದೆ.

## ಎರಡನೆಯ ಸಂಧಿ

[೧]ಆ[೧]ತನಿಂದೇನಹುದು ಲೇಸುಗ
[೨]ಳಾ[೨]ತನಿಂ[೩]ದೇನಹುದು[೩] ಹೊಲ್ಲೆಹ
ವಾತನಿಂ[೪]ದೇ[೪] ಬರಲಿ ಹಿಂದಣಕಾನನಾಲಯ[೫]ವು[೫]
[೬]ಯಾತನೆಯ ಸೈರಿಸಿದ ನಮಗಿ[೬]
[೭]ನ್ನಾತ[೭] ನುಡಿದಡೆ ಹಾನಿಯೇ [೮]ನೀವ್[೮]
ಕಾತರಿಸ್[೯]ದಿರಿಯೆಂದು[೯] ಸಂತೈಸಿದನು ಯಮಸೂನು

---

೧. ಎಸ್. ಎನ್. ಕೃಷ್ಣಜೋಯಿಸ್‌ರ ಸಂಪಾದನೆಯ ಉದ್ಯೋಗಪರ್ವದ ೧ನೆಯ ಸಂಧಿಯ ೩೭ನೆಯ ಪದ್ಯ, ಪುಟಸಂಖ್ಯೆ, ೧೦.

೨. ಎರಡನೆಯ ಸಂಧಿಯ ೪೪ನೆಯ ಪದ್ಯ, ಪುಟಸಂಖ್ಯೆ, ೨೪.

೧. ಈ ಎಂದು ಗ, ಚ, ಜ, ಟ, ಪ ಪ್ರತಿಗಳಲ್ಲಿವೆ.

೨. ಳೀ ಎಂದು ಗ, ಚ, ಜ, ಟ, ಪ ಪ್ರತಿಗಳಲ್ಲಿವೆ.

೩. ದಲಿಸುಟ್ಟು ಎಂದು ಕ, ಖ, ಮ ಪ್ರತಿಗಳಲ್ಲಿವೆ.

೪. ದವೆ ಎಂದು ಣ, ರ ಪ್ರತಿಗಳಲ್ಲಿವೆ.

೫. ದ ಎಂದು ಕ, ಖ, ಪ್ರತಿಗಳಲ್ಲಿವೆ.

ವ ಎಂದು ಠ, ಬ, ಮ ಪ್ರತಿಗಳಲ್ಲಿದೆ.

೬. ಆತನೇ ಸ್ಯೆರಿಸಿದ ನಮಗಿಂ ಎಂದು ಗಾಪ್ರತಿಯಲ್ಲಿದೆ.

ಆತನಿಂದ ತಿಹಿತವರಾಗಿ ಎಂದು ಣ, ರ ಪ್ರತಿಗಳಲ್ಲಿದೆ.

ಆತನೇ ಸೇರಿಸಿದನವಗಿ ಎಂದು ಬ ಪ್ರತಿಯಲ್ಲಿದೆ.

೭. ದೀತ ಎಂದು ಗಾ ಪ್ರತಿಯಲ್ಲಿದೆ.

೮. ನಲಿ ಎಂದು ಕ, ಮ ಪ್ರತಿಯಲ್ಲಿದೆ.

೯. ಬೇಡೆಂದು ಎಂದು ಕ, ಮ, ಪ್ರತಿಗಳಲ್ಲಿದೆ.

ಲೇಕೆಂದು ಎಂದು ಣ, ರ ಪ್ರತಿಗಳಲ್ಲಿದೆ.

## ಮೂರನೆಯ ಸಂಧಿ

ಸ್ಥೂಲಸೂಕ್ಷ್ಮ ಕೃತಜ್ಞನು[೧]ತ್ಸವ[೨]
ಶೀಲನಕ್ರೋ[೩]ಧಿಯನು ದೀರ್ಘ[೪]ವಿ
ಶಾಲಸೂ[೫]ತ್ರಿಯ[೬] ವೃದ್ಧ[೭]ಸೇವಿಯ[೮]ಸತ್ಯವಾಕ್ಪುಚಿಯ
ಕಾಲ[೯]ವೇದಿ[೧೦] ವಿನೀತ [೧೧]ನವ್ಯಸ
ನಾಳಿ ಸೂರಿ *ರಹಸ್ಯ ಸತ್ಕೃತಿ[೧೨]
[೧೩]ಪಾ[೧೪]ಲನಾನ್ವಿತ ಮಂತ್ರಿಯುಂಟೇರಾಯ ನಿನಗೆಂದ

೧. ತ್ತಮ ಎಂದು ಗ, ಚ, ಡ, ಣ, ಪ ಪ್ರತಿಗಳಲ್ಲಿದೆ.

---

೩. ಎಸ್. ಎನ್. ಕೃಷ್ಣಜೋಯಿಸ್‌ರ ಸಂಪಾದನೆಯ ಉದ್ಯೋಗಪರ್ವದ ೩ನೆಯ ಸಂಧಿಯ ೮೫ನೆಯ ಪದ್ಯ, ಪುಟಸಂಖ್ಯೆ, ೪೮.

೨. ಧಿಯನ ದೀರ್ಘ ಎಂದು ಖ ಪ್ರತಿಯಲ್ಲಿದೆ

ಧಕನದೀರ ಎಂದು ಗ, ಡ, ಣ, ಪ ಪ್ರತಿಗಳಲ್ಲಿದೆ.

ಧನಮುದೀರ ಎಂದು ಜ ಪ್ರತಿಯಲ್ಲಿದೆ.

೩. ತ್ರ ನ ಎಂದು ಗ, ಜ, ಡ, ಣ, ಪ ಪ್ರತಿಗಳಲ್ಲಿದೆ.

೪. ಸೇವಕ ಎಂದು ಕ, ಖ, ಮ ಪ್ರತಿಗಳಲ್ಲಿದೆ.

೫. ಸೇವೆಯ ಎಂದು ಚ, ಜ, ಡ, ಬ, ಯ ಪ್ರತಿಗಳಲ್ಲಿದೆ.

೬. ಭೀತ ಎಂದು ಕ, ಖ, ಬ, ಮ, ಪ್ರತಿಗಳಲ್ಲಿದೆ.

ಭೇದಿ ಎಂದು ಚ, ಝ, ನ ಪ್ರತಿಗಳಲ್ಲಿದೆ.

೭. ರೂಪು ವಿಶಾಲ ಸುಸ್ಮಿತವದನ ಮಿಶ್ರುತ ಎಂದು ಚ ಪ್ರತಿಯಲ್ಲಿದೆ,

* ಸತ್ಯಸನಾಳಿಸೂರಿ ಎಂದು ಕ, ಝ, ಮ ಪ್ರತಿಗಳಲ್ಲಿದೆ.

* ನವ್ಯಸನಾಳಿಶೂರ ಎಂದು ಜ, ಡ, ಣ, ಪ ಪ್ರತಿಗಳಲ್ಲಿದೆ.

೮. ಲೋ ಎಂದು ಕ, ಖ, ಬ, ಮ ಪ್ರತಿಗಳಲ್ಲಿದೆ.

## ನಾಲ್ಕನೆಯ ಸಂಧಿ

ಜೀವ ಪರಮನ್ ಭೇದವನು ಸಂ
ಭಾವಿಸದೆ ವೇದಾಂತ ಶಾಸ್ತ್ರವ
ನಾವ ಮುಖವೆಂದ ಱರಿಯದೇ ದಾಸೋಹ ವೆಂದೆನುತ
ಕೋವಿದರ ಸಂಗವನುಳಿದು ಮಾ
ಯಾವಿಲಾಸದ "ನೆಲೆ"ಯ "ನೋಡೆದ"
ಸಾವುತಿ ಹುದೇದ್ವೈತವವನೀಪಾಲ ಕೇಳೆಂದ

೧. ರ ಎಂದು ಖ, ಚ, ತ ಪ್ರತಿಗಳಲ್ಲಿದೆ.

೨. ದಾ ಎಂದು ಕ, ಖ, ಪ ಪ್ರತಿಗಳಲ್ಲಿದೆ.

---

೪. ಎಸ್. ಎನ್. ಕೃಷ್ಣಜೋಯಿಸ್‌ರ ಸಂಪಾದನೆಯ ಉದ್ಯೋಗಪರ್ವದ ೪ನೆಯ ಸಂಧಿಯ ೭೫ನೆಯ ಪದ್ಯ, ಪುಟಸಂಖ್ಯೆ, ೮೦.

೩. ಬುದನು ಎಂದು ಕ, ಖ, ಮ ಪ್ರತಿಗಳಲ್ಲಿದೆ.

೪. ಬಗೆ ಎಂದು ಗ, ಣ ಪ್ರತಿಗಳಲ್ಲಿದೆ.

೫. ನಱುಯದೆ ಎಂದು ಕ, ಮ ಪ್ರತಿಗಳಲ್ಲಿದೆ.

೬. ದದ್ವೈತವವನೀಪಾಲ ಕೇಳೆಂದ ಎಂದು ಕ, ಮ ಪ್ರತಿಗಳಲ್ಲಿದೆ.

ದದ್ವೈತವೇ ಹೇಳೆಂದನಾ ಮುನಿಪ ಎಂದು ಣ, ರ ಪ್ರತಿಗಳಲ್ಲಿದೆ.

ದದ್ವೈತವಿದು ಕೇಳೆಂದನಾ ಮುನಿಪ ಎಂದು ನ ಪ್ರತಿಯಲ್ಲಿದೆ.

ಐದನೆಯ ಸಂಧಿ

ಓಲಗದೊಳುಬ್ಬೆ[೧]ದ್ದಾ[೨] ನುಡಿಗಳ
[೩]ಹೂಳಿ[೩] ತಮತಮಗೆ[೪]ನ್ನ[೪] ಜಱುದರು
ಕಾಳಗಕೆ ಕೈ[೫]ಗ[೫]ಟ್ಟಿ [೫]ಹಿಂ[೫]ಡೆದ್ದೊದ ಱುತವನಿಪರು
ಮೇಲೆ ಸಂತೈಸಿದನು ಧರ್ಮನೃ
ಪಾಲನಲ್ಲಿಂ ಬಳಿಕ [೬]ಮುರಹರ
ನಾ[೬]ಲಯಕೆ ಪರಿಮಿತದಲರ್ಜುನನೆನ್ನ ಕರಸಿದನು.

೧. ದ್ಧ ಎಂದು ಚ ಪ್ರತಿಯಲ್ಲಿದೆ.

೨. ಕೇಳಿ ಎಂದು ಚ ಪ್ರತಿಯಲ್ಲಿದೆ.

೩. ದ್ದು ಎಂದು ಗ ಪ್ರತಿಯಲ್ಲಿದೆ.

೪. ತ ಎಂದು ಬ ಪ್ರತಿಯಲ್ಲಿದೆ.

೫. ಮಿಂ ಎಂದು ಚ, ಟ, ಠ, ನ ಪ್ರತಿಗಳಲ್ಲಿದೆ.

೬. ಮಱುದಿನವಾ ಎಂದು ಝ ಪ್ರತಿಯಲ್ಲಿದೆ.

---

೫. ಎಸ್. ಎನ್. ಕೃಷ್ಣಜೋಯಿಸ್‌ರ ಸಂಪಾದನೆಯ ಉದ್ಯೋಗಪರ್ವದ ೫ನೆಯ ಸಂಧಿಯ ೪ನೆಯ ಪದ್ಯ, ಪುಟಸಂಖ್ಯೆ, ೯೨.

## ಆರನೆಯ ಸಂಧಿ

ಹಗೆಯ [೧]ಲೆಮ್ಮ ಮರುಗಳಲೆದ[೧]ಗಿ
ಚ್ಚುಗಳ ಖುಲ್ಲಕುಠಾರರಪನಂ
ಬುಗೆಯ [೨]ಬಳಸಿ[೨]ದರದು ಪುರಾಕೃತಕರ್ಮದ[೩]ವಶೇಷ[೩]
ಬಗೆಯೆನ [೪]ವ[೪] ಮಾನವನು ಕೌರವ
ರಗಡುಮಾಡಿದರೆಂಬ ಚಿತ್ತದ
ದುಗುಡ[೫]ವೆಮಗಿನ್ನಿ[೫]ಲ್ಲ ಸಂಧಿಯ [೬]ರಚಿಸಿ ಸಾಕೆಂದ[೬]

೧. ನಮ್ಮವರಲ್ಲಿಯಡೆ ಎಂದು ಮ ಪ್ರತಿಯಲ್ಲಿದೆ.
೨. ಮಾಡಿ ಎಂದು ಖ, ಚ, ಣ, ಬ, ಪ್ರತಿಗಳಲ್ಲಿದೆ.
೩. ಫಲಶೇಷ ಎಂದು ಝ ಪ್ರತಿಯಲ್ಲಿದೆ.
ಫಲಭೋಗ ಎಂದು ಬ, ದ ಪ್ರತಿಗಳಲ್ಲಿದೆ.
೪. ಪ ಎಂದು ಕ ಪ್ರತಿಯಲ್ಲಿದೆ.
೫. ವೆನ್ನೊಳಗಿ ಎಂದು ಕ, ಮ, ಪ್ರತಿಗಳಲ್ಲಿದೆ.
೬. ಘಟಿಸಿ ಸಾಕೆಂದ ಎಂದು ಖ, ಟ, ದ, ಬ ಪ್ರತಿಗಳಲ್ಲಿದೆ.
ರಚಿಸಿ ನೀವೆಂದ ಎಂದು ಚ, ಠ, ನ ಪ್ರತಿಗಳಲ್ಲಿದೆ.
ರಚಿಸಬೇಕೆಂದ ಎಂದು ಪ ಪ್ರತಿಯಲ್ಲಿದೆ.

## ಏಳನೆಯ ಸಂಧಿ

ಎಳಲತೆಯನೆಬಿಗಿಸುತ ಮಲೆತರೆ
ತಳಿರುಗಳನಲ್ಲಾಡಿ [೧]ಸುತ[೧] ಪರಿ
ಮಳದ ಕಪ್ಪವ [೨]ಕೊಳುತ[೨]ಮಱಿದುಂಬಿಗಳ ಗೀತವನು
ಸಲೆ ಸೊಗಸಿ ಮಕರಂದನದಿಯಲಿ
ತಳಿ[೩]ತು[೩] ಬೀಡ[೪]ನು[೪] ಬಿಡುತ ವನದಲಿ
ಸುಳಿ[೫]ದುದ್ಯೆ[೫] ತಂಗಾಳಿ ಭೂಮಿಪಾಲನಂದದಲಿ

---

೬. ಎಸ್. ಎನ್. ಕೃಷ್ಣಜೋಯಿಸ್‌ರ ಸಂಪಾದನೆಯ ಉದ್ಯೋಗಪರ್ವದ ೬ನೆಯ ಸಂಧಿಯ ೧೦ನೆಯ ಪದ್ಯ, ಪುಟಸಂಖ್ಯೆ, ೯೯.

೭. ಎಸ್. ಎನ್. ಕೃಷ್ಣಜೋಯಿಸ್‌ರ ಸಂಪಾದನೆಯ ಉದ್ಯೋಗಪರ್ವದ ೭ನೆಯ ಸಂಧಿಯ ೨೫ನೆಯ ಪದ್ಯ, ಪುಟಸಂಖ್ಯೆ, ೧೧೧.

೧. ವರ ಎಂದು ಕ, ಮ ಪ್ರತಿಗಳಲ್ಲಿವೆ.

೨. ಕೊಂಡು ಎಂದು ಕ, ಚ, ಬ, ಮ ಪ್ರತಿಗಳಲ್ಲಿದೆ.

೩. ತ ಎಂದು ಶ, ಖ, ಗ, ಣ, ಪ, ಮ ಪ್ರತಿಗಳಲ್ಲಿದೆ.

೪. ನೆ ಗ, ಡ, ಣ, ಪ ಪ್ರತಿಗಳಲ್ಲಿದೆ.

೫. ದನ್ನೆ ಎಂದು ಕ, ಗ, ಚ, ಮ ಪ್ರತಿಗಳಲ್ಲಿದೆ.

**ಎಂಟನೆಯ ಸಂಧಿ**

ತಳಿತಹುಬ್ಬಿನ ಕುರುಳಕೊಂಕಿನ
ಬಳಲು ಮುಡಿಗಳ [೧]ಹೊಳೆವಧರ ಪಿಂ
ಗಳ ವಿಲೋಚನ[೧] ಗೌರವರ್ಣದ [೨]ಮಂದ[೨]ರಾಗತೆಯ
ಜಲಜ [೩]ಪರಿಮಳ ಮಿಸುಪ[೩] ರೇಮಾ
ವಳಿಯ [೪]ಜಂಘೆಯ ದೊಡ್ಡ ನಡುವಿನ[೪]
[೫]ಲಲಿತವದನದ[೫] ಶಂಖಿನಿಯರೆಸೆದರು [೬]ವಿಲಾಸದಲಿ[೬]

೧. ಕೆಂಪಿನಧರದ ಚಲಿತ ನಯನದ ಎಂದು ಗ, ಟ, ಠ, ಡ, ಣ, ದ, ನ, ಪ ಪ್ರತಿಗಳಲ್ಲಿದೆ.

೨. ನೂನ ಎಂದು ಗ, ಟ, ಠ, ದ, ನ ಪ್ರತಿಗಳಲ್ಲಿದೆ.

೩. ಗಂಧದ ಮೇಱುವ ಎಂದು ಗ, ಟ, ಠ, ಡ, ಣ, ದ, ನ, ಪ, ಪ್ರತಿಗಳಲ್ಲಿದೆ.

೪. ಪೀವರಮಧ್ಯ ಜಂಘೆ ಎಂದು ಠ, ಡ, ಣ, ನ, ಮ ಪ್ರತಿಗಳಲ್ಲಿದೆ.

೫. ನಳನಮುಖಿ ಎಂದು ಕ, ಮ ಪ್ರತಿಗಳಲ್ಲಿದೆ.

೬. ರಾಜಸಭೆಯೊಳಗೆ ಎಂದು ಕ, ಮ ಪ್ರತಿಗಲ್ಲಿದೆ.

---

೮. ಎಸ್. ಎನ್. ಕೃಷ್ಣಜೋಯಿಸ್‌ರ ಸಂಪಾದನೆಯ ಉದ್ಯೋಗಪರ್ವದ ಎಂಟನೆಯ ಸಂಧಿಯ ೪೭ನೆಯ ಪದ್ಯ, ಪುಟಸಂಖ್ಯೆ, ೧೨೫.

## ಒಂಭತ್ತನೆಯ ಸಂಧಿ

[೧]ನೆಲದೊ[೧]ಳರ್ಧವ[೨]ನೀವುದಿಲ್ಲಾ[೨]
ಸ್ಥಳ[೩]ವನ್ನೈದನು ಮುನ್ನ[೩] ಕೊಡೆ[೪]ನೆ
ನ್ನಿಳೆಯ ಭಾಗವನೀಯನಿನ್ನದಕೇಕೆ ಕೈವಾರ[೪]
ನೆಲನ ಕಡೆಯಲಿ ಮುಳ್ಳು ಮೊನೆಯು
ಚ್ಚಳಿಪ ಧರಣಿಯ [೫]ನಿತ್ತ[೫] ನಾದಡೆ
ಬಳಿಕ ನೀ ನಗು ಹೋಗು [೬]ಕದನವ[೬] ಕೊಂಡು ಬಾ[೭]ಯೆಂ[೭]ದ

೧. ಇಳೆಯೊ ಎಂದು ಝ, ಬ ಪ್ರತಿಗಳಲ್ಲಿದೆ.

೨. ನೀಯ್ಯೆನಿಲ್ಲಿಯ ಎಂದು ಕ, ಮ ಪ್ರತಿಗಳಲ್ಲಿದೆ.
ನೀವುದಿಲ್ಲ ಎಂದು ಖ, ಝ, ತ, ನ, ಬ ಪ್ರತಿಗಳಲ್ಲಿದೆ.

೩. ದೊಳೈದೂರುಗಳ ಎಂದು ಕ, ಮ ಪ್ರತಿಗಳಲ್ಲಿದೆ.
ದೊಳೆಂದನು ಮುನ್ನ ಎಂದು ಚ ಪ್ರತಿಯಲ್ಲಿದೆ.

೪. ನಿನ್ನೆಳೆಯ ಭಾಗವನ್ನೈದೆಕೊಡೆಯನ್ನೇಕೆ ಕೈವರ ಎಂದು ಕ, ಮ ಪ್ರತಿಗಳಲ್ಲಿದೆ.
ನ್ನಿಳೆಯೊಳೊಂದೂರೆನಿಸಿಕೊಟ್ಟರೆ ನಿನ್ನ ಮೇಲಾಣೆ ಎಂದು ಗ, ಟ, ಡ, ದ, ನ, ಪ ಪ್ರತಿಗಳಲ್ಲಿದೆ.
ನೊಂದಿಳೆಯ ಭಾಗವನೀತಗೀಯೆ ನಿದೇಕೆ ಕೈವಾರ ಎಂದು ಬ ಪ್ರತಿಗಳಲ್ಲಿದೆ.



೫. ಕೊಟ್ಟೆ ಎಂದು ಝ, ತ ಪ್ರತಿಗಳಲ್ಲಿದೆ.

೬. ಕದನಕೆ ಎಂದು ಕ, ಮ ಪ್ರತಿಗಳಲ್ಲಿದೆ.
ಬರವರ ಎಂದು ಗ, ಟ, ಡ, ನ ಪ್ರತಿಗಳಲ್ಲಿದೆ.

೭. ರೆಂ ಎಂದು ಠ, ನ, ರ ಪ್ರತಿಗಳಲ್ಲಿದೆ.



---

೯. ಎಸ್. ಎನ್. ಕೃಷ್ಣಜೋಯಿಸ್‌ರ ಸಂಪಾದನೆಯ ಉದ್ಯೋಗಪರ್ವದ ೯ನೆಯ ಸಂಧಿಯ ೩೨ನೆಯ ಪದ್ಯ, ಪುಟಸಂಖ್ಯೆ, ೧೪೨.

**ಹತ್ತನೆಯ ಸಂಧಿ**

ಭೇದವಿಲ್ಲೆಲೆ ಕರ್ಣ [೧]ನಿಮ್ಮೊಳು[೧]
ಯಾದವರು ಕೌರವರೊಳಗೆ ಸಂ
[೨]ವಾ[೨]ದಿಸು[೩]ವುದನ್ವಯದ[೩] ಮೊದಲೆರಡಿಲ್ಲ [೪]ನಿನ್ನಾಣೆ[೪]
ಮೇದಿನೀಪತಿ [೫]ನೀನು[೫] ಚಿತ್ತದೊ
ಳಾದು[೬]ದಿಲ್ಲ ಖುವೆನುತ ದಾನವ[೬]
ಸೂದನನು ರವಿಸುತನ ಕಿವಿಯಲಿ ಬಿತ್ತಿದನು[೭]ಭಯವ[೭]

೧. ನಿರ್ಮಲ ಎಂದು ಝ, ಬ ಪ್ರತಿಗಳಲ್ಲಿದೆ.
ಕೇಳೈ ಎಂದು ರ ಪ್ರತಿಯಲ್ಲಿದೆ.

೨. ಪಾ ಎಂದು ಕ, ಗ, ಟ, ಪ, ಬ, ಮ ಪ್ರತಿಗಳಲ್ಲಿದೆ.

೩. ವಡನ್ವಯನಕೆ ಎಂದು ಗ, ಯ, ರ ಪ್ರತಿಗಳಲ್ಲಿದೆ.
ವಡನ್ವಯದ ಎಂದು ಡ, ಣ, ದ, ನ ಪ್ರತಿಗಳಲ್ಲಿದೆ.

೪. ನಿಮ್ಮೊಳಗೆ ಎಂದು ಕ, ಮ ಪ್ರತಿಗಳಲ್ಲಿದೆ.

೫. ನಿನ್ನ ಎಂದು ಕ, ಝ, ಣ, ಠ, ಮ ಪ್ರತಿಗಳಲ್ಲಿದೆ.

೬. ದನು ಅಖುಹು ವೆನೆನುತ ಮಧು ಎಂದು ಕ, ಮ ಪ್ರತಿಗಳಲ್ಲಿದೆ.

೭. ವಿಷವ ಎಂದು ಕ, ಮ ಪ್ರತಿಗಳಲ್ಲಿವೆ.
ಭವವ ಎಂದು ಗ, ಠ, ಣ, ದ ಪ್ರತಿಗಳಲ್ಲಿವೆ.

**ಹನ್ನೊಂದನೆಯ ಸಂಧಿ**

ಪ್ರಳಯ ಜಲನಿಧಿ [೧]ಸಂಚಗೆಟ್ಟವೊ[೧]
ಲಿಳೆ ಕುಸಿಯೆ ಕಮಠಂಗೆ ಮೇಲುಸಿ
ರುಲಿ[೨]ಯೆ[೨] ದಿಗುದಂತಿಗಳು ಮೊಳಕಾಲೂ[೩]ಖುಲಹಿ ಕುಸಿಯೆ[೩]
ಬಲಮಹಾಂಬುದಿ [೪]ಬಲುಗಡಲ[೪] ಮು
ಕ್ಕಳಿ[೫]ಸಿ[೫] ನಡೆದುದು ಕಡುಭರದ ಕಾ
ಲ್ದುಳಿಯ ಕದನಾಳಾಪಕರ ಕಾಹುರತೆ ಹೊಸತಾಯ್ತು.

---

೧೦. ಎಸ್. ಎನ್. ಕೃಷ್ಣಜೋಯಿಸ್‌ರ ಸಂಪಾದನೆಯ ಉದ್ಯೋಗಪರ್ವದ ೧೦ನೆಯ ಸಂಧಿಯ ೩ನೆಯ ಪದ್ಯ, ಪುಟಸಂಖ್ಯೆ, ೧೫೫.

೧೧. ಹನ್ನೊಂದನೆಯ ಸಂಧಿಯ ೪೦ನೆಯ ಪದ್ಯ, ಪುಟಸಂಖ್ಯೆ, ೧೭೫.

೧. ಮೇಜುೆದಪ್ಪುವೊ ಎಂದು ಚ ಪ್ರತಿಯಲ್ಲಿದೆ.

ಪಂಥಗೆಟ್ಟವೊ ಎಂದು ಣ, ತ, ಬ, ಪ್ರತಿಗಳಲ್ಲಿದೆ.

೨. ಳುಕೆ ಎಂದು ಚ, ತ, ಠ ಪ್ರತಿಗಳಲ್ಲಿದೆ.

೩. ಜುಮಡಮುಜುೆಯೆ ಎಂದು ಕ ಪ್ರತಿಯಲ್ಲಿದೆ.

ಜುಮನಗುಂಡೆ ಎಂದು ಟ, ಠ, ದ, ಬ ಪ್ರತಿಗಳಲ್ಲಿದೆ.

೪. ಬಡಬನನು ಎಂದು ಖ, ಟ, ದ, ಬ ಪ್ರತಿಗಳಲ್ಲಿದೆ.

೫. ಸೆ. ಎಂದು ಟ, ದ, ರ ಪ್ರತಿಗಳಲ್ಲಿದೆ.

ಎಂ. ವಿ.ಸೀತಾರಾಮಯ್ಯನವರ 'ಕುಮಾರವ್ಯಾಸ ಭಾರತ ಸಂಗ್ರಹ'ದ ಸಂಪಾದನೆಯ ಬಗ್ಗೆ ಹೇಳುವುದಾದರೆ ಕುಮಾರವ್ಯಾಸ ಮಹಾಕಾವ್ಯದ ಸಂಗ್ರಹವನ್ನು ಪ್ರಕಟಿಸುವ ಬಯಕೆ ಪ್ರೊ.ಎಂ.ವಿ. ಸೀಯವರದು. ಕನ್ನಡ ಸಾಹಿತ್ಯದ ಹೆಮ್ಮೆಯ ಕವಿಯ ಅಸಾಧಾರಣ ಕೃತಿಯನ್ನು ಸಾಮಾನ್ಯ ಜನರ ಕೈಗೆ ತಂದುಕೊಡುವ ಮಹಾದಾಸೆಯಿಂದ ಎರಡು ವರ್ಷಗಳ ಕಾಲ ಸತತವಾಗಿ ಸಂಗ್ರಹಿಸಿ ಪಾಠಪರಿಷ್ಕರಿಸಿ ಸಂಪಾದಿಸಿರುವುದು ಅತಿಮುಖ್ಯವಾದ ಕಾರ್ಯವಾಗಿದೆ. ಈ ಕಾರ್ಯವು ಬಿ.ಎಂ.ಶ್ರೀ ಪ್ರತಿಷ್ಠಾನದ ಮೂಲಕವೇ ಆಗಬೇಕೆಂಬುದೂ ಅವರ ಹಂಬಲವಾಗಿತ್ತು.

- ಪ್ರೊ|| ಎಚ್.ಎಂ. ಶಂಕರನಾರಾಯಣರಾಯರು ಪ್ರತಿಷ್ಠಾನಕ್ಕೆ ದಾನವಾಗಿ ನೀಡಿದ ಹಸ್ತಪ್ರತಿಗಳು.
- ಬಿ.ಎಂ.ಶ್ರೀಕಂಠಯ್ಯ ಮತ್ತು ಟಿ.ಎಸ್. ವೆಂಕಣ್ಣಯ್ಯನವರು ಸೇರಿ ಸಂಗ್ರಹಿಸಿದ್ದ ಹಸ್ತಪ್ರತಿಗಳು.
- ಎ.ಆರ್. ಕೃಷ್ಣಶಾಸ್ತ್ರಿ ಮತ್ತು ಡಿ.ಎಲ್. ನರಸಿಂಹಚಾರ್ಯ ಅವರ ಕೈಬರಹವೂ ಇರುವ ಕೆಲವು ಹಸ್ತಪ್ರತಿಗಳನ್ನು ಆಧಾರವಾಗಿಟ್ಟುಕೊಂಡು ಇದರೊಂದಿಗೆ
- ಈಗಾಗಲೇ ಪ್ರಕಟವಾಗಿರುವ ಹಾಗೂ ಪ್ರತಿಷ್ಠಾನದಲ್ಲಿ ಉಪಲಬ್ಧವಿರುವ ಓಲೆಗರಿಯ ಪ್ರತಿಗಳನ್ನೂ
- ಕುವೆಂಪು, ಮಾಸ್ತಿ ವೆಂಕಟೇಶ ಅಯ್ಯಂಗಾರ್‌ಅವರು ಸಂಪಾದಿಸಿರುವ ಕರ್ಣಾಟಕ ಭಾರತ ಕಥಾಮಂಜರಿಯಿಂದ ಪದ್ಯಗಳನ್ನೂ
- ಪೇಟೆ ಮುದ್ರಣದ ಕೆಲವು ಪ್ರತಿಗಳನ್ನೂ, ಹೀಗೆ ಇನ್ನು ಮುಂತಾದ ಪ್ರತಿಗಳನ್ನು ಪರಿಶೀಲಿಸಿ, 'ಕುಮಾರವ್ಯಾಸ ಭಾರತ ಸಂಗ್ರಹ'ವನ್ನು ಸಂಪಾದಿಸಿರುವುದು ಗಮನಾರ್ಹವಾದ ಸಂಗತಿ.

ಶಾಸ್ತ್ರೀಯ ಸಂಪಾದನಾ ಕಾರ್ಯವನ್ನಾಗಲಿ ಸಮರ್ಪಕ ಸಂಗ್ರಹವನ್ನಾಗಲಿ ಅರಸುವುದು ಉಚಿತವಲ್ಲವೆಂದು ಮುದ್ರಣಗೊಂಡಿರುವ ಬಿಡಿ ಪರ್ವಗಳು, ಪಾಠಾಂತರಗಳನ್ನೊಳಗೊಂಡಿರುವ ಈ ಕೃತಿಯಿಂದ ಜನಸಾಮಾನ್ಯರಿಗೂ ಪಂಡಿತರಿಗೂ ಕಿಂಚಿತ್ ಪ್ರಮಾಣದಲ್ಲಿ ಉಪಯುಕ್ತವಾಗಬೇಕು ಎಂಬುದೂ ಎಂ.ವಿ. ಸೀತಾರಾಮಯ್ಯನವರ ಬಯಕೆಯಾಗಿದ್ದು, ಸಾಮಾನ್ಯ ಓದುಗನಿಗೆ ಪಾಠಾಂತರಗಳ ಗೊಡವೆ ಬೇಕಿಲ್ಲ. ಆತನಿಗೆ ಬೇಕಾದುದುದ ಕಾವ್ಯ. ಅದರ ಭಾವಾರ್ಥ ಮತ್ತು ಅಂತರಾರ್ಥ ಆದ್ದರಿಂದ ಪದ್ಯ ಪ್ರಕಟಗೊಂಡಿರುವ ಪ್ರತಿಪುಟದ ಅಡಿಭಾಗದಲ್ಲಿ ಮೊದಲು ಪಾಠಾಂತರ, ಅನಂತರ ಪದಗಳ ಅರ್ಥಗಳನ್ನು ಕೊಡುವುದು ಸೂಕ್ತವೆಂದು ಎಂ.ವಿ.ಸೀ ಅವರು ಅಭಿಪ್ರಾಯಪಟ್ಟು ಅದೇ ಕ್ರಮವನ್ನು ಕೊನೆಯವರೆಗೂ ಅನುಸರಿಸಿದ್ದಾರೆ.

ಎಂ.ವಿ. ಸೀತಾರಾಮಯ್ಯನವರು ಸಂಪಾದಿಸಿರುವ ಕುಮಾರವ್ಯಾಸ ಭಾರತ ಸಂಗ್ರಹ ಕೃತಿಯ ಅಡಿಟಿಪ್ಪಣಿಯಲ್ಲಿ ನೀಡಿರುವ ಮಾಹಿತಿ, ಪಾಠಾಂತರ ಮತ್ತು ತಾವು ಪರಿಶೀಲಿಸಿರುವ ಪ್ರತಿಗಳು, ಸ್ವೀಕರಿಸಿರುವ ಸ್ವೀಕೃತಪಾಠಗಳ ಬಗ್ಗೆ ಪ್ರಾರಂಭದಲ್ಲಿಯೇ 'ಸಾಂಕೇತಾಕ್ಷರಗಳ ವಿವರ' ಎಂದು ಸಂಕೇತಗಳನ್ನು ವಿವರಿಸುತ್ತಾರೆ. ಇದರಿಂದ ಓದುಗನಿಗೆ ಸುಲಭವಾಗಿ ಅರ್ಥವಾಗಲು, ಇತರ ಪಾಠಾಂತರದ ಬಗ್ಗೆ ಅರಿಯಲು, ಬಳಸಿರುವ ಪ್ರತಿಗಳನ್ನು ತಿಳಿಯಲು ತುಂಬ ಉಪಯುಕ್ತವಾಗಿದೆ.

**ಸಾಂಕೇತಾಕ್ಷರಗಳ ವಿವರ**

**ಅ :** ಕನ್ನಡ ಅಧ್ಯಯನ ಸಂಸ್ಥೆ ಪ್ರಕಟಿಸಿರುವ ಬಿಡಿ ಪರ್ವಗಳು.

**ಆ :** ಆಧಾರ ಪ್ರತಿ - ಬಿ.ಎಂ.ಶ್ರೀ ಮುಂತಾದವರು ಸಿದ್ಧಪಡಿಸಿದ ಕಾಗದ ಪ್ರತಿ

**ಓ :** ಓರಿಯಂಟಲ್ ಗ್ರಂಥಾಲಯದ ಪ್ರತಿ.

**ಕುಮಾ :** ಕುವೆಂಪು ಮಾಸ್ತಿಯವರ ಸಂಪಾದಕತ್ವದ ಜನಪ್ರಿಯ ಆವೃತ್ತಿ.

**ಕ :** ಆಧಾರ ಪ್ರತಿಯಲ್ಲಿ ನಮೂದಿಸಿರುವ ಪಾಠ

**k :** ಆಧಾರ ಪ್ರತಿಯಲ್ಲಿ ಉಲ್ಲೇಖಿಸಿರುವ ಕಿಟ್ಟಲ್ ಅವರ ಸೈಕ್ಲೋಸ್ಟೈಲ್ ಪ್ರತಿ

**ಪ್ರ :** ಪ್ರತಿಷ್ಠಾನದ ಹಸ್ತಪ್ರತಿ

**ಪೇ :** ಪೇಟೆ ಮುದ್ರಣ ಪ್ರತಿ.

**ಸ :** ಸರಸ್ವತೀ ಭಂಡಾರದ ಪ್ರತಿ, ಇದಕ್ಕೆ 'ಅ' ಪ್ರತಿಯಲ್ಲಿ 'ರ' ಎಂಬ ಸಂಕೇತಾಕ್ಷರವಿದ್ದು 'ಆ' ಪ್ರತಿಯಲ್ಲಿ 'ವಿ' ಎಂದೂ ಸೂಚಿಸಿದೆ.

**ಸರ್ವತ್ರ :** ಸಂಪಾದಕ ವರ್ಗ ನೀಡಿರುವ ಎಲ್ಲ ಪ್ರತಿಗಳಲ್ಲೂ ಇರುವ ಪಾಠ

* :  ಈ ಚಿಹ್ನೆ ಇರುವ ಕಡೆ ಶಿಥಿಲದ್ವಿತ್ವ.

[ ] :  ಈ ಕಂಸದಲ್ಲಿರುವುದು ಸಂಪಾದಕರ ಪಾಠಪರಿಷ್ಕರಣ

ಸ್ವೀಪಾ :  ಸ್ವೀಕೃತಪಾಠ ಅದರ ಮುಂದೆ ಇರುವ ( ) ಕಂಸ ಯಾವ ಪ್ರತಿಯಿಂದ ಎಂದು ಸೂಚಿಸಿದೆ.

ಇಲ್ಲಿಯ ಸಂಕೇತಗಳಲ್ಲಿ ಕೆಲವು ಎಂ.ವಿ. ಸೀತಾರಾಮಯ್ಯನವರು ತಾವೇ ಮಾಡಿಕೊಂಡಿರುವ ಸಂಕೇತಗಳು ಎಂಬುದು ಗಮನಾರ್ಹ.

**ಅರ್ಜುನ ದುರ್ಯೋಧನರು ಕೃಷ್ಣನಲ್ಲಿಗೆ ಹೋದದ್ದು**

೧. ಓಲೆಯುಡುಗೊಜೆಸಹಿತಧರಣೀ
ಪಾಲರಿಗೆ ಪಾಂಡವರು ಶಿಷ್ಟರು
ಕಾಳಗಕೆ [೧]ನೆರ[೧] ವಾಗಲೋಸುಗ ಕರೆದರಲ್ಲಲ್ಲಿ
ಆಳುಕುದುರೆಯ [೨]ನೆರಹಿ[೨] [೩]ಬಂದರು[೩]
ಮೂಲೆಯರಸುಗಳೆಲ್ಲ ಕುರುಭೂ
ಪಾಲನಲ್ಲಿಗೆ ಕೆಲರು ಕೆಲಬರು [೪]**ಪಾಂಡವರ ಹೊರೆಗೆ**[೪]

೧. ಬಲ ಎಂಬುದು ಓ, ಕ, k, ಪ್ರತಿಗಳಲ್ಲಿದೆ.

೨. ಕೂಡಿ ಎಂದು ಆ, ಕುಮಾ, ಪ, ಕ, k ಪ್ರತಿಗಳಲ್ಲಿದೆ.

೩. ದೆಸೆಗಳ ಎಂದು ಆ, ಕುಮಾ ಪ್ರತಿಗಳಲ್ಲಿದೆ.
ದಿಕ್ಕಿನ ಎಂದು ಅ ಪ್ರತಿಯಲ್ಲಿದೆ.
ಸ್ವೀಕೃತಪಾಠವನ್ನು ಓ ಪ್ರತಿಯಿಂದ ಸ್ವೀಕರಿಸಿದ್ದಾರೆ.

೪. ಪಾಂಡುತನಯರಿಗೆ ಎಂದು ಸರ್ವತ್ರದಲ್ಲಿದೆ.
ಸ್ವೀಕೃತಪಾಠ ಓ ಪ್ರತಿಯಿಂದ ನಿರ್ಧರಿಸಿದ್ದಾರೆ.
ಪದಗಳ ಅರ್ಥ : ನೆರಹು - ಒಟ್ಟುಗೂಡಿಸು,
ಹೊರೆ - ಹತ್ತಿರ, ಸಮೀಪ.

---

೧. ಎಂ. ವಿ. ಸೀತಾರಾಮಯ್ಯನವರ ಕುಮಾರವ್ಯಾಸಭಾರತ ಸಂಗ್ರಹದ ೪ನೆಯ ಪದ್ಯ, ಪುಟಸಂಖ್ಯೆ, ೩೦೨.

**ಸಂಜಯನ ದೌತ್ಯ**

೧. ಸಾಕು ಕೌರವನಾಯ ಮಾತನ
ದೇಕೆ ಚಿತ್ತೈಸುವಿರಿ ದೂತನ
ನೂಕು ನೂಕು ಕುಠಾರದುರ್ಯೋಧನನನೊಡೆಹೊಯ್ದು!
ಶಾಕಿನಿಯರನು ರಕುತವಾ[೧]ರಿಯ
ಲೊ[೧]ಕುಳಿಯನಾಡಿಸುವೆ ನಿಲು ತಡ
ವೇಕೆನುತ ಘುಡಿ ಘುಡಿಸಿ ಕಿಡಿ ಕಿಡಿ[೨]ಯಾ[೨]ದನಾ ಭೀಮ

೧. ಯೊಳೋ ಎಂದು ಆ, ಕುಮಾ ಪ್ರತಿಗಳಲ್ಲಿದೆ.
ಸ್ವೀಕೃತಪಾಠ k ಪ್ರತಿಯಿಂದ ನಿರ್ಧರಿಸಿದ್ದಾರೆ.
೨. ಯೋ ಎಂದು ಕ, ಓ, k ಪ್ರತಿಗಳಲ್ಲಿವೆ.
ಪದಗಳ ಅರ್ಥ : ಕುಠಾರ - ಕೊಡಲಿ.
ವಾರಿ - ನೀರು.

**ಕೃಷ್ಣ ಸಂಧಾನ**

೨. ಸೋಲ[೧]ಗೆಲ್ಲವದೇಕೆ ಕುರುವಂ
ಶಾಳಿಯೊಳು[೧] ಸೋದರರು ನೀವೆ ಪಾಂ
ಚಾಲರಾವೇ ಹೊಱಗು ನಿಮ್ಮೊಳು ಸಲುಗೆಯೇಕೆಮಗೆ
ಮೇಳವೇ ಸಿರಿ ಗಳಿ[೨]ಸಲರಿದು[೨] [೩]ಜ
ನಾಳಿ[೩] ಹೆಂಡಿರ ಪೂರ್ವವೇಕ್ಷತಿ
ಪಾಲಕರು ನೀವಾಗಲೆ ಮಗದುಪರಮ ಪರಿಣಾಮ

೧. ಗೆಲವೇ ಕೌರವರ ಸಂಪಾಳಿಯೊಳು ಎಂದು ಆ, ಕುಮಾ ಪ್ರತಿಗಳಲ್ಲಿದೆ.
ಗೆಲವೇ ಕೌರವರ ವಂಶಾವಳಿಯಲಿ ಎಂದು ಅ ಪ್ರತಿಯಲ್ಲಿದೆ.
ಸ್ವೀಕೃತ ಪಾಠವನ್ನು ಓ, k ಪ್ರತಿಯಿಂದ ನಿರ್ಧರಿಸಿದ್ದಾರೆ.

---

೧. ಎಂ. ವಿ. ಸೀತಾರಾಮಯ್ಯನವರ ಕುಮಾರವ್ಯಾಸಭಾರತ ಸಂಗ್ರಹದ ೩೯ನೆಯ ಪದ್ಯ, ಪುಟಸಂಖ್ಯೆ, ೩೧೪.
೨. ಎಂ. ವಿ. ಸೀತಾರಾಮಯ್ಯನವರ ಕುಮಾರವ್ಯಾಸಭಾರತ ಸಂಗ್ರಹದ ಉದ್ಯೋಗಪರ್ವದ ೧೭೬ನೆಯ ಪದ್ಯ, ಪುಟಸಂಖ್ಯೆ, ೩೫೫.

೨. ಘಟಿಸಿತದು ಎಂದು ಆ ಪ್ರತಿಯಲ್ಲಿದೆ.

ಸ್ವೀಕೃತಪಾಠ ಸರ್ವತ್ರದಿಂದ ನಿರ್ಧರಿಸಿದ್ದಾರೆ.

೩. ಜನಜಾಲ ಎಂದು ಅ ಪ್ರತಿಯಲ್ಲಿದೆ.

ಸ್ವೀಕೃತಪಾಠ ಸರ್ವತ್ರದಿಂದ ನಿರ್ಧರಿಸಿದ್ದಾರೆ.

ಪದಗಳ ಅರ್ಥ : ಜನಾಳಿ - ಜನರ ಗುಂಪು, ಅರಿದು - ಅಸಾಧ್ಯ,

ಪರಮ ಪರಿಣಾಮ - ಪರಮ ಸಂತೋಷ.

**ಕರ್ಣನನ್ನು ಭೇದಿಸಿದ್ದು**

ಮಸೆದುದಿತ್ತಂಡದಲಿ ಮತ್ಸರ
[೧]ವಸಮಸಂಗರ ವೀಗ[೧] [೨]ಸಂಧಿಯ[೨]
ನುಸಿರಿದೊಡೆ ಮನಗಾ[೩]ಣ[೩]ನೇ ಕೌರವ ಮಹೀಶ್ವರನು
[೪]ವಿಶಸನದ[೪] ಕಟ್ಬಾಳು ಮಂತ್ರ[೫]ವ
ನೆಸಗ[೫]ಲಾಗದು ತನ್ನ ವೀ[೬]ರತೆ[೬]
[೬]ಮ[೬]ಸುಳಹುದು ಮುರವೈರಿ ಸಂಧಿಯನು ಋಯೆನಾನೆಂದ ನು

೧. ಪಸರಿಸಿತು ತಾನೀಗ ಎಂದು ಆ ಪ್ರತಿಯಲ್ಲಿದೆ.

ಸ್ವೀಕೃತಪಾಠವನ್ನು k , ಓ, ಅ. ಕುಮಾ ಪ್ರತಿಯಿಂದ ನಿರ್ಧರಿಸಿದ್ದಾರೆ.

೨. ನೀತಿಯ ಎಂದು ಅ, ಆ, ಕುಮಾ ಪ್ರತಿಗಳಲ್ಲಿದೆ.

ಸ್ವೀಕೃತಪಾಠವನ್ನು ಓ ಪ್ರತಿಯಿಂದ ನಿರ್ಧರಿಸಿದ್ದಾರೆ.

೩. ಣ್ಬ ಎಂದು ಆ ಪ್ರತಿಯಲ್ಲಿದೆ.

ಸ್ವೀಕೃತಪಾಠವನ್ನು ಅ, ಕುಮಾ ಪ್ರತಿಗಳಿಂದ ನಿರ್ಧರಿಸಿದ್ದಾರೆ.

೪. ವಿಷಮವದು ಎಂದು ಆ ಪ್ರತಿಯಲ್ಲಿದೆ.

ವಿಷಮನದ ಎಂದು ಆ ಪ್ರತಿಯಲ್ಲಿದೆ.

ಸ್ವೀಕೃತಪಾಠವನ್ನು k, ಕುಮಾ ಪ್ರತಿಗಳಿಂದ ನಿರ್ಧರಿಸಿದ್ದಾರೆ.

---

ಎಂ. ವಿ. ಸೀತಾರಾಮಯ್ಯನವರ ಕುಮಾರವ್ಯಾಸಭಾರತ ಸಂಗ್ರಹದ ಉದ್ಯೋಗಪರ್ವದ೧೬ನೆಯ ಪದ್ಯ, ಪುಟಸಂಖ್ಯೆ,೨೪೮.

೫. ದೊಳೆಸಗ ಎಂದು ಆ ಪ್ರತಿಯಲ್ಲಿದೆ.

ಸ್ವೀಕೃತಪಾಠವನ್ನು ಅ, ಕುಮಾ ಪ್ರತಿಗಳಿಂದ ನಿರ್ಧರಿಸಿದ್ದಾರೆ.

೬. ರಕೆ ಎಂದು ಕುಮಾ, ಆ ಪ್ರತಿಯಲ್ಲಿದೆ.

೭. ನು ಎಂದು ಆ ಪ್ರತಿಯಲ್ಲಿದೆ.

ಸ್ವೀಕೃತಪಾಠವನ್ನು ಓ, ಅ, ಕುಮಾ ಪ್ರತಿಗಳಿಂದ ನಿರ್ಧರಿಸಿದ್ದಾರೆ.

ಪದಗಳ ಅರ್ಥ : ವಿಶ (ಸ)ಸನ - ಯುದ್ಧ, ಕಾಳಗ,

ಮಸುಳು - ಕಾಂತಿಹೀನತೆ, ಮಂಕು.

**ಕುರುಕ್ಷೇತ್ರಕ್ಕೆ ಪಯಣ**

[೧]ಆಳು[೧]ಹರಿದುದು ದೆಸೆದೆಸೆಗೆ ಭೂ
ಪಾಲರಿಗೆ ರಾಯಸದ ಹದನನು
ಕೇಳಿದಾಗಲೆ [೨]ಕವಿದು[೨] ಬಂದರು ತಮ್ಮ ದಳಸಹಿತ
ಸೂಳವಿಸಿದವು ಸನ್ನೆಯಲಿ ನಿ
ಸ್ಸಾಳ ವಂದಿನ ಮಱುದಿವಸ[೩]ವೈ
ಹಾಳಿಯನು[೩] ಹೊಱವಂಟರನಿಬರು ದೈತ್ಯರಿಪುಸಹಿತ

೧. ಚೂಳಿ ಎಂದು ಆ ಪ್ರತಿಯಲ್ಲಿದೆ.

ಜೋಳಿ ಎಂದು ಓ, ಕ, k, ಕುಮಾ, ಅ ಪ್ರತಿಗಳಲ್ಲಿದೆ.

ಸ್ವೀಕೃತಪಾಠವನ್ನು ಕಾ ಪ್ರತಿಯಿಂದ ನಿರ್ಧರಿಸಿದ್ದಾರೆ.

೨. ಹರಿದು ಎಂದು ಕ ಪ್ರತಿಯಲ್ಲಿದೆ.

೩. ದೆಖ್ಖಾಳವನು ಎಂದು ಪ್ರ ಮತ್ತು k ಪ್ರತಿಗಳಲ್ಲಿದೆ.

ಪದಗಳ ಅರ್ಥ : ಆಳು - ಯೋಧರು, ಭಟರು

ಹರಿ - ವೇಗವಾಗಿ ಚಲಿಸು,

ರಾಯಸ - ನಿರೂಪ, ನಿಸ್ಸಾಳ - ಭೇರಿ,

ಕವಿ - ಮುತ್ತು, ಸೂಳವಿಸು - ಹೊಡೆ, ಬಾರಿಸು,

ವೈಹಾಳಿ - ಅಶ್ವಾರೋಹಣ ಪ್ರದರ್ಶನ, ಕುದುರೆಯ ಓಟ, ಕುದುರೆಯ ಸಂಚಾರ

---

ಎಂ. ವಿ. ಸೀತಾರಾಮಯ್ಯನವರ ಕುಮಾರವ್ಯಾಸಭಾರತ ಸಂಗ್ರಹದ ಉದ್ಯೋಗಪರ್ವದ ೧೯೧ನೆಯ ಪದ್ಯ, ಪುಟಸಂಖ್ಯೆ, ೩೬೪.

ಭೂಮಿಯೊಳಗರ್ಧವನು ಬೇಡಿದೊ
ಡಾ ಮಹಿ¹ಮ ನಿಮ್ಮೈ¹ವರಿಗೆ ಸಂ
ಗ್ರಾಮಭೂಮಿಯನ್ನೆದೆ ಕೊಟ್ಟನು ನಿಮ್ಮೊಳಪ್ರಿಯನು।
ಸಾಮದಲಿ ಸೊಗಸಿಲ್ಲ ನೀವ್ ನಿ
ಸ್ಸೀಮರಾದೊಡೆ ²ಕೂ²ಡಿಸುವುದು
ದ್ದಾಮ ಕುರುಭೂಮಿಯಲಿ ³ಬಲಸಹಿತವರ³ ಪತಿಕರಿಸಿ

೧. ಪತಿಯ್ಮೆ ಎಂದು ಆ, ಕಮಾ ಪ್ರತಿಯಲ್ಲಿದೆ.
ಪನಿಮ್ಮೈ ಎಂದು ಪ್ರ, k, ಅ ಪ್ರತಿಯಲ್ಲಿದೆ.
ಸ್ವೀಕೃತಪಾಠ ಕ ಪ್ರತಿಯಿಂದ ಸ್ವೀಕರಿಸಲಾಗಿದೆ.

೨. ಜೋ ಎಂದು ಆ, ಕುಮಾ ಪ್ರತಿಯಲ್ಲಿದೆ.
ಹೂ ಅ ಪ್ರತಿಯಲ್ಲಿದೆ.

೩. ಕುಳವರಿದವರ ಎಂದು ಆ.ಕುಮಾ ಪ್ರತಿಯಲ್ಲಿದೆ.
ಪ, ಓ, k, ಅ ಪ್ರತಿಗಳಿಂದ ಸ್ವೀಕರಿಸಲಾಗಿದೆ.
ಪತಿಕರಿಸಿ - ಅಂಗೀಕರಿಸು, ಸಾದಿಸು - ಎದುರಿಸು

* * * * *

ಎಂ. ವಿ. ಸೀತಾರಾಮಯ್ಯನವರ ಕುಮಾರವ್ಯಾಸಭಾರತ ಸಂಗ್ರಹದ ಉದ್ಯೋಗಪರ್ವದ ೧೮೭ನೆಯ ಪದ್ಯ, ಪುಟಸಂಖ್ಯೆ, ೩೬೨.

# ಅಧ್ಯಾಯ - ೫

## ಸಂಪಾದನೆಯ ಕೆಲವು ಮಾದರಿಗಳು

'ಎಸ್.ಎನ್. ಕೃಷ್ಣಜೋಯಿಸ್' ಅವರ ಉದ್ಯೋಗಪರ್ವ

ಕೇಳು ಜನಮೇಜಯಧರಿತ್ರೀ
ಪಾಲ **ಕುಂತೀ ತನಯ** ರುನ್ನತ
ದೇಳಿಗೆಯನೇನೆಂಬೆನೈ ಕಾರುಣ್ಯಸಿಂಧುವಲ।
ಶ್ರೀ ಲತಾಂಗಿಯರಮಣನೈವರೊ
ಳಾಳೊಡೆಯರಾರೆಂಬ ಭೇದವ
ಬೀಳುಕೊಟ್ಟೇ ನಡಸುತಿರ್ದನು ತನ್ನ ಮೈದುನರ

ಈ ಪದ್ಯದ **ಕುಂತೀತನಯ** ಎಂಬಲ್ಲಿ **ಪಾಂಡುಕುಮಾರ** ಎಂದು ಕ, ಠ, ಣ, ಮ ಪ್ರತಿಗಳಲ್ಲಿದೆ.

ಎಸ್.ಎನ್. ಕೃಷ್ಣಜೋಯಿಸರು ಪಾಂಡುಕುಮಾರ ಎಂಬುವಲ್ಲಿ ಕುಂತೀತನಯ ಎಂದು ಪ್ರಯೋಗಮಾಡಿರುವುದು ಔಚಿತ್ಯಪೂರ್ಣವಾಗಿದೆ. ಪಾಂಡು ಇಲ್ಲದೆ ಇರುವಕಾರಣ ಕುಂತಿ ಇರುವುದರಿಂದ ಕುಂತೀತನಯ ಎಂಬುದು ಹೆಚ್ಚು ಸೂಕ್ತ. ಹಾಗೂ ಜೀವಂತವಾಗಿರುವವರಿಗೆ ಬೆಲೆಕೊಡುವುದು ಮುಖ್ಯ ಪಾಂಡುತಂದೆಯಾದರೂ, ಸಂಪೂರ್ಣವಾಗಿ ಮಕ್ಕಳ ಹೊಣೆ ಬಾಲ್ಯದಿಂದ ಕುಂತಿಯದೆಯಾಗಿದೆ. ಹಾಗೆ ಈ ಪರ್ವದಲ್ಲಿ ಕುಂತಿ ತನ್ನ ಮಕ್ಕಳಿಗಾಗಿ ಚಿಂತಿಸುವುದು, ಮಕ್ಕಳ ರಕ್ಷಣೆಗಾಗಿ ಕರ್ಣನನ್ನು ಬೇಡುವುದು ಮುಂತಾದ ಭಾಗಕ್ಕೆ ಇದು ಆಧಾರವಾಗುತ್ತದೆ.

– U U – U      – – U U U

ಪಾಂಡುಕುಮಾರನ ಬದಲಿಗೆ ಕುಂತೀತನಯ ಎಂದಿರುವುದು. ಎರಡು ಪದಗಳಿಗೂ ಏಳುಮಾತ್ರೆಗಳು ಬರುವುದರಿಂದ ತಾಳ, ಲಯ ಛಂದಸ್ಸಿಗೆ ಯಾವರೀತಿಯೂ ಲೋಪವಾಗುವುದಿಲ್ಲ ಎಂಬ ಅಂಶ ಅತಿಮುಖ್ಯವಾದುದು.

---

ಎಸ್. ಎನ್. ಕೃಷ್ಣಜೋಯಿಸ್‌ರ ಸಂಪಾದನೆಯ ಉದ್ಯೋಗಪರ್ವದ ೧ನೆಯ ಸಂಧಿಯ ೧ನೆಯ ಪದ್ಯ, ಪುಟಸಂಖ್ಯೆ, ೧.

೧. **ಹೇಳಿಕೆಗೆ** ಬಾಯ್ಬಿಡುವ ವೇದದ
ತಾಳಿಗೆಗಳೊಣಗಿದವು ಘನತೆಯ
ಮೇಲೆ ತನ್ನದು ಘನತೆಯೆಂಬುದನತ್ತ ಬೇಱುರಿಸಿ।
ಕಾಲಿಗೆಱಗುವನಾ ಯುಧಿಷ್ಠಿರ
ನೇಳಲೊಡನೇಳುವನು ಕೃಷ್ಣನ
ಲೀಲೆಯನುಪಮವೆಂದು ವೈಶಂಪಾಯನಮುನಿ ನುಡಿದ

**ಹೇಳಿಕೆಗೆ** ಬದಲಾಗಿ **ಹೋಲಿಕೆಗೆ** ಎಂದು **ಕ, ಠ, ಮ,** ಪ್ರತಿಗಳಲ್ಲಿದೆ ಮತ್ತು ಹೇಳಿಗೆಗೆ ಎಂದು **ಗ** ಪ್ರತಿಯಲ್ಲಿದೆ. ಸಂಪಾದಕರು ಹೇಳಿಕೆಗೆ ಎಂದು ಸ್ವೀಕರಿಸಿರುವುದು ಗಮನಾರ್ಹ.

ಹೇಳಿಕೆ ಎಂಬ ಪದ ಮುಂದಿನ ಪದವಾದ ಬಾಯ್ಬಿಡುವ ಪದಕ್ಕೆ ಸೂಕ್ತವಾಗಿದೆ. ಅಂದರೆ ಓದುಗನಿಗೆ ಸುಲಭವಾಗಿ ಅರ್ಥವಾಗುತ್ತದೆ. ಹೇಳಿಕೆಗೆ ಎಂಬ ಪದ ಪ್ರಯೋಗವು ತುಂಬ ಸೂಕ್ತವಾಗಿದೆ.

೨. ಲೇಸನಾಡಿದೆ ರಾಮ ಬಳಿಕಿ
ನ್ನಾ ಸುಯೋಧನನಧಮನೇ ನೀ
ನೇ ಸನೇಱುಸಿಕೊಂಡು ನುಡಿ ವಾ ಮತ್ತೆ ಕೆಲಬರಿಲ!
ಅಸುರದ **ಕತ್ತಲೆಯ ಬೀಡು** ಮ
ಹಾಸಹಾಯವು ಗೂಗೆಗಳಿಗುಪ
ಹಾಸವೇ ದಿಟವೆಂದು ಸಾತ್ಯಕಿ ನಗುತ ಖತಿಗೊಂಡ

**ಬಲುಕತ್ತಲೆಗಳು** ಎಂದು ಟ, ಡ, ದ, ನ ಪ್ರತಿಗಳಲ್ಲಿದೆ. ಹಾಗೂ **ಕತ್ತಲೆಯ ಕಟಕ** ಎಂದು ಬ, ಯ ಪ್ರತಿಗಳಲ್ಲಿದೆ. ಸಂಪಾದಕರು **ಕತ್ತಲೆಯ ಬೀಡು** ಎಂದು ಸ್ವೀಕರಿಸಿರುವುದು ಗಮನಾರ್ಹ. ಇಲ್ಲಿ ಪದದ ಅರ್ಥ ಮುಖ್ಯವಾಗಿ ಪದ್ಯಕ್ಕೆ **ಕತ್ತಲೆಯ ಬೀಡು** ಎಂಬ ಪದವೇ ಹೆಚ್ಚು ಸೂಕ್ತವಾಗಿ ತೋರುತ್ತದೆ.

---

೧. ಎಸ್. ಎನ್. ಕೃಷ್ಣಜೋಯಿಸ್‌ರ ಸಂಪಾದನೆಯ ಉದ್ಯೋಗಪರ್ವದ ೧ನೆಯ ಸಂಧಿಯ ೨ನೆಯ ಪದ್ಯ, ಪುಟಸಂಖ್ಯೆ, ೧.

೨. ೧ನೆಯ ಸಂಧಿಯ ೭ನೆಯ ಪದ್ಯ, ಪುಟಸಂಖ್ಯೆ, ೩.

೧. ಓಲೆವುಡುಗೊಱೆಸಹಿತ ಧರಣೀ
ಪಾಲರಿಗೆ ಪಾಂಡವರ ಶಿಷ್ಟರು
ಕಾಳಗಕೆ ನೆರವಾಗಲೋಸುಗ ಕರೆದರಲ್ಲಲ್ಲಿ।
ಆಳುಕುದುರೆಯ ನೆರಹಿ ದಿಕ್ಕಿನ
ಮೂಲೆಯರಸುಗಳೆಲ್ಲ ಕುರುಭೂ
ಪಾಲನಲ್ಲಿಗೆ ಕೆಲರು ಕೆಲಬರು ಪಾಂಡು ತನಯರಿಗೆ

ದೆಸೆಗಳ ಎಂದು ಖ, ಗಾ, ಠ, ತ, ಪ್ರತಿಗಳಲ್ಲಿದೆ. ಆದರೂ ದೆಸೆಗಳ ಬದಲು ದಿಕ್ಕಿನ ಎಂಬ ಪದ ಪ್ರಯೋಗ ಓದುಗನಿಗೆ ಸುಲಭವಾಗಿ ಅರ್ಥವಾಗುತ್ತದೆ.

೨. ಅಟ್ಟಿ ಬಳಲಿದ ಶ್ರುತಿಗೆ ಹರಿ ಮೈ
ಗೊಟ್ಟ ಠಾವಿದು ತಾಪಸರು ಜಪ
ಗುಟ್ಟಿ ಜಿನುಗಿ ದಡವರನುಜ್ಜೀವಿಸಿದ [೧]ತಾಣವಿದು[೧]
ಹುಟ್ಟುಸಾವಿನ ವಿಲಗದವರನು
ಬಿಟ್ಟ ಠಾವಿದು [೨]ಕಾಲಕರ್ಮದ[೨]
ಥಟ್ಟು ಮುಱೆವಡೆದೋಡಿದೆಡೆಯಿದು ಶಿವಶಿವಾಯೆಂದ

೧. ಠಾವಿಲದ ಎಂದು ಕ, ಚ, ಠ, ಮ ಪ್ರತಿಗಳಲ್ಲಿದೆ.

೨. ತರ್ಕತಂತ್ರದ ಎಂದು ಕ, ಠ, ಮ ಪ್ರತಿಗಳಲ್ಲಿದೆ.

ಸಂಪಾದಕರು ಇಲ್ಲಿ ಠಾವಿಲದ ಎಂಬ ಪದಕ್ಕೆ ಬದಲಾಗಿ **ತಾಣವಿದು** ಎಂದು, **ತರ್ಕತಂತ್ರದ** ಎಂಬ ಪದಕ್ಕೆ ಬದಲಾಗಿ ಕಾಲಕರ್ಮದ ಎಂದು ಸ್ವೀಕರಿಸಿದ್ದಾರೆ.

೨. ತಗರೆರಡ ಖತಿಗೊಳಿಸಿ ಬಲುಗಾ
ಳಗವ ನೋಡುವರಂತೆ ನಿಮ್ಮನು
ತೆಗೆತೆಗೆದು ಕಲಿಮಾಡಿ ಬಿಡುವರು ಖುಲ್ಲರಾದವರು
ನಗುತ ಹೆಱೆಹಿಂಗುವರು ಹಿಸುಣರು
ಬಗುಳಿದವರದಿರು ಬಳಿಕ ಕಡೆಯಲಿ
ಹೋಗುವಿರ್ಯೆ ನೀವಿಬ್ಬರಪ ಕೀರ್ತ್ಯಂಗನೇಯ ಮನೆಯ

---

೧. ೧ನೆಯ ಸಂಧಿಯ ೧೫ನೆಯ ಪದ್ಯ, ಪುಟಸಂಖ್ಯೆ, ೪ ಮತ್ತು ೫.

೨. ೧ನೆಯ ಸಂಧಿಯ ೨೧ನೆಯ ಪದ್ಯ, ಪುಟಸಂಖ್ಯೆ, ೬. ೩. ೧ನೆಯ ಸಂಧಿಯ ೩೦ನೆಯ ಪದ್ಯ, ಪುಟಸಂಖ್ಯೆ, ೮.

**ಕೀರಿತಿಯ ಹಾದರಕೆ** ಎಂದು ಗ, ಚ, ಟ, ದ, ನ, ಬ ಪ್ರತಿಗಳಲ್ಲಿದೆ.

**ಕೀರಿತಿಯ ಸಾಗರವ** ಎಂದು ಝ ಪ್ರತಿಯಲ್ಲಿದೆ.

**ಕೀರಿತಿಯ ಪರಿಣಯಕೆ** ಎಂದು ಠ ಪ್ರತಿಯಲ್ಲಿದೆ.

ಇವುಗಳ ಬದಲಾಗಿ **ಕೀರ್ತ್ಯಂಗನೇಯ ಮನೆಯ** ಎಂದು ಸ್ವೀಕರಿಸಿದ್ದಾರೆ.

ಕೀರಿತಿ, ಕೀರ್ತಿ ಎಂಬ ಪದಗಳ ಅರ್ಥ ಒಂದೇ ಆದರೂ ಹೇಳುವ ವಿಧಾನ ಅತಿಮುಖ್ಯವಾದ ಅಂಶ.

೧. ಸುರಗಿಯನು ಬಿಸುಟೊಱೆಯನಂಗೀ
ಕರಿಸಿದವೊಲಿಂದಾಹವದ ಧರ
ಧುರದ ಯಾದವಬಲವನೊಲ್ಲದೆ ಮಂದಮತಿಯಾಗಿ।
ಮರುಳೆ ಕಾದದ ಕಟ್ಟಿದೆಮ್ಮನು
ಬಱುದೆ ಬಯಸಿದೆಯಿದನು ಕೇಳ್ದರೆ
ಮರುಳುಗುಟ್ಟದೆ **ಮಾಣರೇ ನಿನ್ನಣ್ಣತಮ್ಮದಿರು**

ಮಾಬ್ಬರೇ ನಿನ್ನ ಗ್ರಜಾನುಜರು ಎಂದು ಣ, ರ ಪ್ರತಿಗಳಲ್ಲಿದೆ. ಇಲ್ಲಿ ಅಗ್ರಜಾ ಎಂಬುದರ ಬದಲು ಅಣ್ಣ ತಮ್ಮ ಎಂಬುದು ಓದುಗನಿಗೆ ಸುಲಭವಾಗಿ ಅರ್ಥವಾಗುತ್ತದೆ.

೨. ಮೇಳವಿಸಿ ಹೊಱವಂಟನಗಣಿತ
ದಾಳುಕುದುರೆಯ ಕೂಡಿ ಬರುತಿರೆ
ಕೇಳಿದನು ಕುರುರಾಯನ ಮದ್ರಾಧಿಪನ ಬರವ।
ಆಳೊಳಗ್ಗಳನದಶಲ್ಯನೃ
ಪಾಲಕನ ತಿರುಹಿದರೆ ಗೆಲುವುದು
ಕಾಳೆಗವು ತನಗೆಂದು ನಿಶ್ಚೈಸಿದನು **ಮನದೊಳಗೆ**

**ಚಿತ್ತದಲಿ** ಎಂದು ಗ, ಚ, ಜ, ಡ, ರ ಪ್ರತಿಗಳಲ್ಲಿದೆ.

**ಮಂತ್ರದಲ್ಲಿ** ಎಂದು ಬ, ಠ ಪ್ರತಿಗಳಲ್ಲಿದೆ.

**ನಿಜಮತವ** ಎಂದು ಯ ಪ್ರತಿಯಲ್ಲಿದೆ.

---

೧. ೧ನೆಯ ಸಂಧಿಯ ೪೧ನೆಯ ಪದ್ಯ, ಪುಟಸಂಖ್ಯೆ, ೧೧.

೨. ೨ನೆಯ ಸಂಧಿಯ ೭ನೆಯ ಪದ್ಯ, ಪುಟಸಂಖ್ಯೆ, ೧೫.

**ನಿಶ್ಚೈಸಿದನು ಮನದೊಳಗೆ** ಎಂಬ ಪದವು ಓದುಗನಿಗೆ ಸುಲಭವಾಗಿ ಅರ್ಥವಾಗುವಂತೆ ಇತರ ಪದಗಳಾದ **ಚಿತ್ತದಲಿ**, **ಮಂತ್ರದಲಿ** ಮತ್ತು **ನಿಜಮತವ**, ಎಂಬ ಶಬ್ದ ಸುಲಭವಾಗಿ ಅರ್ಥವಾಗುವುದಿಲ್ಲ.

**ಚಿತ್ತ** ಎಂಬ ಶಬ್ದವು ಸೂಕ್ತವಾದರೂ, **ಮಂತ್ರದಲ್ಲಿ** ಹಾಗೂ **ನಿಜಮತವ** ಎಂಬ ಶಬ್ದಗಳು ಸಾಮಾನ್ಯ ಓದುಗನಿಗೆ ಬೇರೆ ದಾರಿಯನ್ನೇ ಸೂಚಿಸಬಹುದು. ಇವರ ಸಂಪಾದನೆಯ ಉದ್ದೇಶ ಪ್ರತಿಯೊಬ್ಬ ಪಾಮರನಿಗೂ - ಸಾಮಾನ್ಯನಿಗೂ ಅರ್ಥವಾಗಬೇಕು ಎಂಬುದು.

೧. **ಕರಣಿಕರು ಮಂತ್ರಿಗಳು ವೈದ್ಯರು**
ಸರಸಕವಿಗಳ ತಾರ್ಕಿಕರು ವರ
ಭರತ ನಿಪುಣರು ಗಾಯಕರು ಪಾಠಕರು ವಾದಿಗಳು।
ಕರಿತುರಗ ಶಿಕ್ಷಕರು ಲಕ್ಷಣ
ಪರಿಣತರು ಕೋವಿದರು ಸಾವಂ
ತರುಗಳು ಪಹಾಸಕರು ವೈತಾಳಿಕರು ರಂಜಿಸಿತು।।

**ಮಾಂತ್ರಿಕರು ವೈದ್ಯರು** ಎಂದು ಠ ಪ್ರತಿಯಲ್ಲಿದೆ.

**ಮಂತ್ರಿಗಳು ವೈದ್ಯರು** ಎಂದು ತ ಪ್ರತಿಯಲ್ಲಿದೆ.

ಇಲ್ಲಿ ಸ್ವೀಕರಿಸಿರುವ ಪಾಠ ಮಂತ್ರಿಗಳು ವೈದ್ಯರು ಎಂಬ ಪದ ಖಚಿತವಾದ ಧ್ವನಿಗಳನ್ನು ವ್ಯಕ್ತಪಡಿಸುತ್ತದೆ.

೨. ಏನು ಬಂದ್ಯೆ ಹದನು **ಕೌರವ**
**ರೇನನೆಂದರು ಕುರುಕುಲೇಶ್ವರ**
ನೇನನೆಕ್ಕಟಿ ಬುದ್ಧಿಗಲಿಸಿದನವರ ಮಾತುಗಳ
ಏನುವನು ನೀನುಳುಹದಿರು ವಿನ
ಯಾನುಗತವಾಗಿರಲಿ ಮೇಣ್ ಶೌ
ರ್ಯಾನುಗತವಾಗಿರಲಿ ಬಿನ್ನೈಸೆಂದನ ಸುರಾರಿ

**ಕೌರವನೇನನೆಂದನು** ಅವನಿಪಾಲಕ ಎಂದು ಗ, ಝ, ಡ, ಪ, ಯ, ರ ಪ್ರತಿಗಳಲ್ಲಿದೆ.

---

೧. ೨ನೆಯ ಸಂಧಿಯ ೨೬ನೆಯ ಪದ್ಯ, ಪುಟಸಂಖ್ಯೆ, ೨೦.

೨. ೨ನೆಯ ಸಂಧಿಯ ೩೭ನೆಯ ಪದ್ಯ, ಪುಟಸಂಖ್ಯೆ, ೨೩.

**ಕಾರಿಯ ವೇನೆಂದನು ಕೌರವೇಶ್ವರ** ಎಂದು ಟ, ದ, ಬ ಪ್ರತಿಗಳಲ್ಲಿದೆ. **ಕೌರವೇಶ್ವರ** ಎಂಬುದು ಸೂಕ್ತ ಸಂಬೋಧನೆಯಾದರೂ **ಕುರುಕುಲೇಶ್ವರ** ಎಂಬುದು ಔಚಿತ್ಯಪೂರ್ಣವಾಗಿದ್ದು ಕುರುಕುಲಕ್ಕೆ ಒಡೆಯ ಎಂದು ವಿಧಿತವಾಗುತ್ತದೆ.

೧. ದೀಪದೀಪವ ತೊಳಲಿ ಕರ್ಮಕ
ಳಾಪದಲಿ ಕುದಿಕುದಿದು ನಾನಾ
ರೂಪಿನಿಂದಾರ್ಜಿಸಿದ ಸುಕೃತದಗೊಡವೆ ತಾನೇಕೆ।
ಭೂಪ ಕೇಳೈ ಸತ್ಯವೊಂದೇ
ಸೋಪನವು ಸಗ್ಗಕ್ಕೆ ಜನ್ಮದ
**ಕೂಪರಕ್ಕಿದು** ನಾವೆಯಾಗಿಹುದೆಂದನಾವಿದುರ

**ಕೂಪಕಿದು** ಎಂದು ಚ, ಣ ಪ್ರತಿಗಳಲ್ಲಿದೆ.

**ಪಾಪನದಿಗಿದು** ಎಂದು ಬ, ಮ ಪ್ರತಿಗಳಲ್ಲಿದೆ. ಆದರೆ ಇದಕ್ಕೆ ಬದಲಾಗಿ ಇಲ್ಲಿ **ಕೂಪರಕ್ಕಿದು** ಎಂದು ಸ್ವೀಕರಿಸಿದ್ದಾರೆ.

೨. ಧನಮದದಿ ಕುಲಮದದಿ ಘನಯೌ
ವನಮದದಿ ವಿದ್ಯಾಮದದಿ ಗುರು
ವನು ವಿಭಾಡಿಸಿ ನೀನು ತಾನೆಂದೆನುತಹಂಕರಿಸಿ।
**ಕನಲಿ ವಿಪ್ರಸಭಾಸ್ಥಳದೊಳೆ**
**ಬ್ಬನ ವಿಭಾಡಿಸಿ ನುಡಿದ** ಮನುಜನು
ಜನಿಸುವನಲೈ ಬ್ರಹ್ಮರಾಕ್ಷಸನಾ ಗರಣ್ಯದಲಿ

**ಮುನಿಸನಲಿ ಸಾತ್ವಿಕರುಗಳೊ**

**ಳೊಬ್ಬನನು ಘರ್ಜಿಸಿ ನುಡಿದ** ಎಂದು ಕ, ಮ ಪ್ರತಿಗಳಲ್ಲಿದೆ. ಇಲ್ಲಿ ಸಂಪಾದಕರು ಪ್ರತಿ ಪದ್ಯಗಳನ್ನು ಆಯ್ಕೆ ಮಾಡುವಾಗ ಉಳಿದೆಲ್ಲ ಪ್ರತಿಗಳ ಪದಗಳನ್ನೆಲ್ಲಾ ಇಟ್ಟು ಯಾವುದು ಸೂಕ್ತವೆಂದು ನಿರ್ಧರಿಸಿರುವುದು ತಿಳಿಯುತ್ತದೆ. ಸಂಪಾದನೆಯ ಅವಧಿಯಲ್ಲಿ ಅವರು ಪಟ್ಟ ಶ್ರಮ, ಶ್ರದ್ಧೆ ಆಸಕ್ತಿ ಎಲ್ಲವನ್ನು ಇಲ್ಲಿ ಗಮನಿಸಬಹುದು.

---

೧. ೩ನೆಯ ಸಂಧಿಯ ೮ನೆಯ ಪದ್ಯ, ಪುಟಸಂಖ್ಯೆ, ೨೮ ಮತ್ತು ೨೯.

೨. ೩ನೆಯ ಸಂಧಿಯ ೪೦ನೆಯ ಪದ್ಯ, ಪುಟಸಂಖ್ಯೆ, ೩೬.

೧. ಹರುಷ ದರ್ಪ ಕ್ರೋಧ ಲಜ್ಜಾ
ತುರತೆ ಮಾನ ವಿಮಾನವಿವಜಿಲಿ
ನಿರುತತಮ ನೆಂದೆನಿಸಿ ಕೃತ್ಯಾಕೃತ್ಯಕೌಶಲವ
ವಿರಚಿಸುವ ಕಾಲದಲಿ ವಿರಚಿಸ
ಲಱಿಯದತಿದರ್ಪಾತಿರೇಕೋ
ತ್ತರದಿ ಮಾಡಿದ ಕಾರ್ಯವೇನಹುದೆಂದನಾ ವಿದುರ

ಶ್ರೀ ತೋಷ್ಣವನುಭಯವಡ್ಡೈಸಲದ ಱುಂ ಪರಿಹರಸದಾ ಕಾರ್ಯವೆಸಗುವವನೆ ಪಂಡಿತನು ಎಂದು ಕ, ಮ ಪ್ರತಿಗಳಲ್ಲಿರುವುದು ತಿಳಿಯುತ್ತದೆ.

೨. ಕಳಿದ ತರಣಿಯ ಕಿರಣದಲಿ ನಿ
ರ್ಮಳದ ಜಲದಲಿ ದುಗ್ಧಪಾನಂ
ಗಳಲಿ ವರಯುವತಿಯರ ಸಂಭೋಗದಲಿ ಭೂಸುರರ
ತಳಿತಹೋಮದ ಹೊಗೆಗಳಲಿ ದಿನ
ಬಲದೊಳಾಯುಷ್ಯಾಭಿವೃದ್ಧಿಯ
ಬೆಳವಿಗೆಗಳಹವರಸ ಚಿತ್ತೈಸೆಂದನಾ ವಿದುರ

ಸಂಚಲಿಸುವವಗಾ ಯುಷ್ಯವೃದ್ಧಿಯು ಬಲಿವುದೈ ದಿನದಿನದೊಳ ವನೀಪಾಲ ಕೇಳೆಂದ ಎಂದು ಗ, ಡ, ಣ, ಯ ಪ್ರತಿಗಳಲ್ಲಿದೆ. ಆದರೆ ಖ, ಟ, ದ ಪ್ರತಿಗಳಲ್ಲಿ ಈ ಪದ್ಯವೇ ಇಲ್ಲ. ಪ್ರತಿ ಪದ್ಯಕ್ಕೂ ಪ್ರತಿ ಪ್ರತಿಗಳನ್ನು ನೋಡಿರುವುದನ್ನು ಗಮನಿಸಬಹುದು.

೩. ಜನಜನಿತಮಲಮೂತ್ರ ಮೂಱು
ಱನಿಸುವುವು ರತಿಯೊಂದು ನಿಜಭೋ
ಜನವೆರಡು ಸುಯಿಲೊಂದು ವರತಾಂಬೂಲ ಹದಿನೈದು
ಇನಿತುವನು ತಪ್ಪದೆ ನಡೆಸಲಾ
ಜನಪಗಾರೋಗ್ಯಾತ್ಮಸುಖ ಸಂ
ಜನಿಸುವುದು ದಿನದಿನದೊಳವನೀಪಾಲ ಕೇಳೆಂದ

---

೧. ೩ನೆಯ ಸಂಧಿಯ ೪೪ನೆಯ ಪದ್ಯ, ಪುಟಸಂಖ್ಯೆ, ೩೭.
೨. ೩ನೆಯ ಸಂಧಿಯ ೫೫ನೆಯ ಪದ್ಯ, ಪುಟಸಂಖ್ಯೆ, ೪೦.
೩. ೩ನೆಯ ಸಂಧಿಯ ೫೯ನೆಯ ಪದ್ಯ, ಪುಟಸಂಖ್ಯೆ, ೪೧.

**ಸಂದೇಹವೇ** ಧೃತರಾಷ್ಟ್ರ ಎಂದು ಖ ಪ್ರತಿಯಲ್ಲಿದೆ.

**ಚರಿಯದಿಂದವನೀಶ** ಎಂದು ಟ, ಠ, ದ, ನ ಪ್ರತಿಗಳಲ್ಲಿದೆ.

ಎಸ್. ಎನ್. ಕೃಷ್ಣಜೋಯಿಸರು ದಿನದಿನದೊಳವನೀಪಾಲ ಎಂದು ಸ್ವೀಕರಿಸಿದ್ದಾರೆ.

೧. ಮತ್ತನತಿಶ್ರಾಂತನು ಪ್ರಮತ್ತೋ
ನ್ಮತ್ತನತಿಕುಪಿತಾನನನು ಚಲ
ಚಿತ್ತನತಿ ಕಾಮುಕನು ಲುಬ್ಧನು **ಶೂರನೆಂಬವನು**
ಕ್ಷುತ್ತು ಘನವಾಗುಳ್ಳನಿಂತೀ
ಹತ್ತು ಜನವಾವಾಗ ಧರ್ಮದ
ತತ್ತವಣೆಗಳನಱಿಯರೈ ಧೃತರಾಷ್ಟ್ರ ಕೇಳೆಂದ

**ಮದ್ಯಪಾನಿಗಳು** ಎಂದು ಚ ಪ್ರತಿಯಲ್ಲಿದೆ.

**ರೋಗಿಯೆಂಬುವನು** ಎಂದು ಜ, ಣ ಪ್ರತಿಗಳಲ್ಲಿದೆ.

ಸ್ವೀಕೃತವಾಗಿ **ಶೂರನೆಂಬುವನು** ಎಂಬ ಪದವನ್ನು ಪ್ರಯೋಗಿಸಿರುವುದು ಹೆಚ್ಚು ಸೂಕ್ತ.

೨. ವೇಸಿಯಹ ಪರಿಯಂಕದೆಡೆಯಲಿ
ದಾಸಿಯಹ ಪರಿಚಯದಲಿ ನಿ
ರ್ದೋಷಿಯಲಿ ಪತಿಭಕ್ತಿಯಲಿ **ಮೋಹದಲಿ ತಾಯೆನಿಸಿ**
ಏಸುಕಾರ್ಯಕೆ ಮಂತ್ರಿಯೆನಿಸುವ
ಮೈಸಿರಿಯನುಳವಳು ರಾಣೀ
ವಾಸವೆಂದೆನಿಸು ವಳಲೈ ಭೂಪಾಲ ಕೇಳೆಂದ

**ವಿನಯದಲಿ ತಾನೆ** ಎಂದ ಜ ಪ್ರತಿಯಲ್ಲಿದೆ.

**ತಾಯೆ** ಎಂಬ ಪದ **ತಾನೆ** ಎಂಬ ಪದದ ವ್ಯತ್ಯಾಸಗಮನಿಸಿದರೆ

ನಿಸಿ ಎಂಬ ಮುಂದಿನಪದಕ್ಕೆ ತಾಯೆ ಎಂಬುದೇ ಹೆಚ್ಚು ಸೂಕ್ತವಾಗುತ್ತದೆ.

---

೧. ೩ನೆಯ ಸಂಧಿಯ ೭೪ನೆಯ ಪದ್ಯ, ಪುಟಸಂಖ್ಯೆ, ೪೫.

೨. ೩ನೆಯ ಸಂಧಿಯ ೭೮ನೆಯ ಪದ್ಯ, ಪುಟಸಂಖ್ಯೆ, ೪೬.

೧. ಪರಿಪರಿಯ ದಾನಂಗಳನು ಕರೆ
ಕರೆದು ಲೋಗರಿಗಿತ್ತು ಪರರನು
ಹೊರೆದು ತನ್ನಾಶ್ರಿತರನತಿಗಳೆದಾಪ್ತ ಬಾಂಧವರ
ಸರಕುಮಾಡದೆ ಗರ್ವದಿಂದು
ಬ್ಬರಿಸುತಿಹ ಪಾತಕರ ಪದವಿಯ
ನರಸ ಬಣ್ಣಿಸಲಾರು ಬಲ್ಲರು ಯಮನ ನಗರಿಯಲಿ

ಮೂರು ಲೋಕದಲಿ ಎಂದು ಣ ಪ್ರತಿಯಲ್ಲಿದೆ. ಆದರೆ ಯಮನ ನಗರಿಯಲಿ ಎಂಬ ಪದವೇ ಹೆಚ್ಚು ಸೂಕ್ತವಾದುದು.

೨. ನಾಯಿಗಳ ನುಡಿಗೇಳಿ ನೀನು ವೃ
ಥಾಯ ಕೆಡಬೇಡಾ ಯುಧಿಷ್ಠಿರ
ರಾಯನನು ಕರಸುವುದು ಭೀಷ್ಮಾದಿಗಳ ಮುಂದಿಟ್ಟು
ನ್ಯಾಯಮುಖದಲಿ ಸಕಲರಾಜ್ಯ
ಶ್ರೀಯೊಳರ್ಧವನಿತ್ತು ಬದುಕುವು
ದಾಯತಿಕೆಯೊಳಗಹುದು ಚಿತ್ತೈಸೆಂದನಾ ವಿದುರ

ನಾಯನಡೆ ಭೋಜನವ ನೆಚ್ಚಿ ವೃಥಾಯ ಕೆಡಬೇಡಾ ಎಂದು ಖ ಪ್ರತಿಯಲ್ಲಿದೆ.

ನಾಯನಡೆ ಭೋಗವನು ನಂಬಿ ವೃಥಾಯ ಕೆಡಬೇಡ ಎಂದು ಚ ಪ್ರತಿಯಲ್ಲಿದೆ.

ನ್ಯಾಯಮಾರ್ಗವ ಬಿಟ್ಟು ನೀ ನಿರ್ದಾಯದಲಿ ಕೆಡದಿರು ಎಂದು ನ ಪ್ರತಿಯಲ್ಲಿದೆ.

ನಾಯಡಗಬೋನವನು ನಂಬಿ ವೃಥಾಯ ಕೆಡಬೇಡಾ ಎಂದು ಕ ಪ್ರತಿಯಲ್ಲಿದೆ. ಆದರೆ ಸಂಪಾದಕರು ಸ್ವೀಕರಿಸಿರುವುದು ನಾಯಿಗಳ ನುಡಿಗೇಳಿ ನೀನು ವೃಥಾಯ ಕೆಡಬೇಡಾ

---

೧. ೩ನೆಯ ಸಂಧಿಯ ೧೦೮ನೆಯ ಪದ್ಯ, ಪುಟಸಂಖ್ಯೆ, ೫೪.

೨. ೩ನೆಯ ಸಂಧಿಯ ೧೨೦ನೆಯ ಪದ್ಯ, ಪುಟಸಂಖ್ಯೆ, ೫೭ ಮತ್ತು ೫೮.

೧. ಒರ್ವನೇ ಬಲ್ಲವನು ಲೋಕದೊ
ಳಿರ್ವರಿಲ್ಲ ಸನತ್ಸುಜಾತನು
ಸರ್ವಗುಣ ಸಂಪನ್ನನಾತನ ಭಜಿಸಿದಡೆ ನೀನು
ಸೇವ್ಯ ನಹೆಯೆನಲಾ ಮುನಿಯಕ
ರ್ತವ್ಯ ಭಾವದಲರಸ ನಿರಲಾ
ಗುರ್ವಿಯಮರತಿಲಕ ಕೃಪೆಯಲಿ ಬಂದನಾ ಮುನಿಪ

ಸಭ್ಯ ನೀನಹೆಯನೆ ಮುನಿಯ ಕಥೆ

ನಾಭ್ಯುದಯ ದೊಳರಸನೆನಲಾ

ವುಬ್ಬರಿಸಿದನು ವಿಪ್ರಕುಲ ಕಮಲಾರ್ಕನಾಕ್ಷಣಕೆ ಎಂದು 'ತ' ಪ್ರತಿಯಲ್ಲಿದೆ. ಪದ್ಯದ ಉತ್ತರಾರ್ಧ ಪೂರ್ಣ ಈ ರೀತಿ ಇರುವುದನ್ನು ಗಮನಿಸಬಹುದು.

೨. ಆಱುಗುಣ ಋತುವಾಱು ವರ್ಣವ
ದಾಱು ದರ್ಶನ ಪಾತ್ರವಂಗವ
ದಾಱು ಭೇದವ ಬಗೆಯನಱುದುತ್ಕೃಷ್ಟ ಮಾರ್ಗದಲಿ।
ತೋಱುವೀ ಮಾಯಾಪ್ರಪಂಚವ
ಮೀಱು ಕೇಡಿಲ್ಲದ ಪದವ ಕೈ
ಸೂಱೆಗೊಂಬುದು ಪರಮಮಂತ್ರವಿದೆಂದನಾ ಮುನಿಪ

ಷಡುವರ್ಣಕರ್ಮವ ಎಂದು ಕ ಪ್ರತಿಯಲ್ಲಿದೆ.

ಋತುವರ್ಣವರ್ಗವ ಎಂದು ಗ, ಡ, ಪ ಪ್ರತಿಗಳಲ್ಲಿದೆ.

ಋತುವರ್ಣ ವರ್ಣವ ಎಂದು ಚ, ಯ ಪ್ರತಿಗಳಲ್ಲಿದೆ.

ಮೇಲಿನ ಪದಗಳನ್ನು ಗಮನಿಸಿದರೆ ಋತುವಾಱು ವರ್ಣದ ಎಂಬ ಪದವೇ ಹೆಚ್ಚು ಸೂಕ್ತವೆನಿಸುತ್ತದೆ.

---

೧. ೪ನೆಯ ಸಂಧಿಯ ೩ನೆಯ ಪದ್ಯ, ಪುಟಸಂಖ್ಯೆ, ೬೧.

೨. ೪ನೆಯ ಸಂಧಿಯ ೩೩ನೆಯ ಪದ್ಯ, ಪುಟಸಂಖ್ಯೆ, ೬೯.

೧. ನವ ನವವ್ಯೂಂಗಳಬುಜೋ
ಧೃವನ ಪಾಳಿ ವಿಖಂಡ ನವರಸ
ನವವಿಧಗ್ರಹನಾಟಕಂಗಳ ಲಕ್ಷಣವನಱುದು
ನವವಿಧಾವಳ ಭಕ್ತಿರಸವನು
ಸವಿದು ನಿತ್ಯಾ ನಿತ್ಯ ವಸ್ತುವ
ನವರಸವನಾರೈ ವರುತ್ತಮ ಪುರುಷರವರೆಂದ।

U U U – U U – U – U U
**ನವನವಗ್ರಹ ನಾಟಕಂಗಳ** ಎಂದು ಕ, ಮ ಪ್ರತಿಯಲ್ಲಿದೆ.

U U U U U – U U U – U U
**ದವಿನಯದ ವಿಗ್ರಹದ ನಾಟಕ** ಎಂದು ಚ ಪ್ರತಿಯಲ್ಲಿದೆ.

U U U – U U U U U – U U
**ನವನವಗ್ರಹವಿಧದ ನಾಟಕ** ಎಂದು ಬ ಪ್ರತಿಯಲ್ಲಿದೆ.

U U U – U U U U U – U U
**ನವನವಗ್ರಹವಿಧಿಯ ನಾಟಕ** ಎಂದು ಜ, ಡ, ಣ, ಪ, ಯ, ರ ಪ್ರತಿಗಳಲ್ಲಿದೆ.

ಒಂದು ಪದ್ಯದ ಒಂದು ಸಾಲಿಗೆ ೧೦ ಪ್ರತಿಗಳನ್ನು ನೋಡಿ ಪರಿಶೀಲಿಸಿ ಸೂಕ್ತವಾದದ್ದನ್ನು ಆಯ್ಕೆ ಮಾಡಿರುವುದು ಸಂಪಾದನಾ ಕಾರ್ಯದ ಸಾಧನೆಯನ್ನು ವ್ಯಕ್ತಪಡಿಸುತ್ತದೆ.

U U U – U U – U – U U
**ನವವಿಧಗ್ರಹ ನಾಟಕಂಗಳ** ಎಂಬ ಪದಗಳನ್ನು ಗಮನಿಸಿದರೆ ಯಾವ ಪ್ರತಿಯಲ್ಲಿಯೇ ಆದರೂ ಅದು ಒಟ್ಟು ೧೪ ಮಾತ್ರೆಗಳನ್ನು ಮಾತ್ರ ಒಳಗೊಂಡಿರುವುದು ಪ್ರತಿಯೊಬ್ಬ ಲಿಪಿಕಾರನ ವಿವೇಕವನ್ನು ವ್ಯಕ್ತಪಡಿಸುತ್ತದೆ.

೨. ಧರಣಿಪನ ಸಂತೈಸಿದನು ಮುನಿ
ವರನು ತನ್ನಾಶ್ರಮಕೆ ತಿರುಗಿದ
ನುರುತರ ಪ್ರೇಮದಲಿ ಧೃತರಾಷ್ಟ್ರವನೀಶ್ವರನು।
ಹರೆಯದಮಲಾನಂದರಸದಲಿ
ಹೊರೆದು ಹೊಂಪುಳಿಯೋಗಿ ಲಕ್ಷ್ಮೀ
ವರನ ನೆನೆದನು ರಾಯ ಗದುಗಿನ ವೀರನರಯಣನ।

---

೧. ೪ನೆಯ ಸಂಧಿಯ ೩೬ನೆಯ ಪದ್ಯ, ಪುಟಸಂಖ್ಯೆ, ೭೦.

೨. ೪ನೆಯ ಸಂಧಿಯ ೧೦೪ನೆಯ ಪದ್ಯ, ಪುಟಸಂಖ್ಯೆ, ೯೦.

**ಕೇಳು ಜನಮೇಜಯ ಮಹೀಪಾಲ** ಎಂದು ಬ ಪ್ರತಿಯಲ್ಲಿದೆ. ಇಲ್ಲಿ ಕುಮಾರವ್ಯಾಸನ ಕೃತಿಯಲಿ ರಾಯ ಗದುಗಿನ ವೀರನರಯಣನ ಎಂಬ ಪದವೇ ಉತ್ತಮ ಎನಿಸುತ್ತದೆ.

೧. ಬೀಳುಕೊಂಡುದು ರಜನಿ ಕುರುಭೂ
ಪಾಲನುಪ್ಪವಡಿಸಿದ ನೋಲಗ
ಶಾಲೆಯಲಿ ನೆರೆಹಿದನು **ಸಭ್ಯರನಾಪ್ತಮಂತ್ರಿಗಳ**
ಕೇಳುವೆವು ಕರೆ ಸಂಜಯನನವ
ರೋಲಗದ ಮೈಸಿರಿಯನೆಂದು ನೃ
ಪಾಲನಟ್ಟಿದ ದೂತನೊಡನೈತಂದ ನೋಲಗಕೆ

**ಸಚಿವನಾಪ್ತ** ಮನ್ನೆಯರ ಎಂದು ಙ ಪ್ರತಿಯಲ್ಲಿದೆ.

**ಸಭ್ಯರನಾಪ್ತ** ಮಂತ್ರಿಗಳ ಎಂಬ ಪದವೇ ಉತ್ತಮವೆನಿಸುತ್ತದೆ.

೨. ಬಂದು **ಕಾಣಿಕೆಗೊಟ್ಟು ಹರುಷದೊ**
**ಳಂದು ಮೈಯಿಕ್ಕಿದನು ಕುಂತೀ**
ನಂದನನು ಬೆಸಗೊಂಡು ಕಳುಹಿದನುಚಿತವಚನದಲಿ
ಎಂದು ಬಳಿಕಿನ ರಾಜಕಾರ್ಯವ
ನಂದು ಬಿನ್ನೈಸಿದನು ಚಿತ್ರೈ
ಸೆಂದು ಧೃತರಾಷ್ಟ್ರಂಗೆ ದುರ್ಯೋಧನಗೆ ಕೈಮುಗಿದು

**ಮೈಯಿಕ್ಕಿದನು ಕುರುನೃಪವೃಂದವನು** ಪರಿವಾರವನುಯಮ ಎಂದು ಖ, ಗ, ಬ, ಮ, ಯ ಪ್ರತಿಗಳಲ್ಲಿದೆ. ಆದರೆ ಸಂಪಾದಕರು **ಕಾಣಿಕೆಗೊಟ್ಟು ಹರುಷದೊಳಂದು ಮೈಯಿಕ್ಕಿದನು ಕುಂತೀ** ಎಂಬುದನ್ನು ಸ್ವೀಕರಿಸಿದ್ದಾರೆ.

---

೧. ೫ನೆಯ ಸಂಧಿಯ ೧ನೆಯ ಪದ್ಯ, ಪುಟಸಂಖ್ಯೆ, ೯೧.

೨. ೫ನೆಯ ಸಂಧಿಯ ೨ನೆಯ ಪದ್ಯ, ಪುಟಸಂಖ್ಯೆ, ೯೧.

೧. ಜೀಯ ಬಿನ್ನಹವಿಂದು ಪಾಂಡವ
ರಾಯರೈಶ್ವರ್ಯವನು ಸಾವಿರ
ಬಾಯಶೇಷನು ಹೊಗಳಾಳವಲ್ಲೆನ್ನ ಪಾಡೇನು
ನಾಯಕರ ಕಡುಹುಗಳನವರವ
ರಾಯತವನನಿಬರಿಗೆ ಕಮಲದ
ಳಾಯತಾಕ್ಷನ ಕರುಣದಳತೆ **ವಿಚಿತ್ರವಾಯ್ತೆಂದ**

**ವಿಚಿತ್ರ ತರವೆಂದ** ಎಂದು ಝ, ನ, ಬ, ಯ, ರ ಪ್ರತಿಗಳಲ್ಲಿದೆ. ತರವೆಂದ ಎಂಬ ಪದಕ್ಕಿಂತ ಹಿಂದಿನ ಪದಕ್ಕೆ ಅನುಗುಣವಾಗಿ ಹೊಂದಿಕೊಳ್ಳುವುದು **ವಾಯ್ತೆಂದ** ಪದವೇ.

೨. ನೆನೆವುದೆಂದನು ಪಾರ್ಥನಾ ಕಾ
ನನದೊಳಗೆ ಗಂಧರ್ವರಲಿ ಬಂ
[1]ಧನವನಾ[1] ಗೋಗ್ರಹಣಲಿ ಮಾಡಿದ [2]**ಪರಾಭವವ**[2]
ವನಜಮುಖಿಯನು ಬಯಸಿದಡೆ ಬಿ
ಲ್ಲಿನಲಿ ಬಡಿವಡೆದುದನು ಕೌರವ
ಜನಪ ಮಱೆದಿರಲಾಗದೆಂದರಸಂಗೆ ಹೇಳೆಂದ

೧. **ದನುವನಾ** ಎಂದು ಚ, ಟ, ದ ಪ್ರತಿಗಳಲ್ಲಿದೆ.
**ದನುವರವ** ಎಂದು ಠ, ಣ, ಪ, ಯ, ರ ಪ್ರತಿಗಳಲ್ಲಿದೆ.

೨. **ಪಲಾಯನವ** ಎಂದು ಕ, ಖ, ಗ, ಪ, ಮ ಪ್ರತಿಗಳಲ್ಲಿದೆ.
**ಪರಾಕ್ರಮವ** ಎಂದು ಚ, ಬ ಪ್ರತಿಗಳಲ್ಲಿದೆ.

ಸಂಪಾದನಾ ಕಾರ್ಯದಲ್ಲಿ ಪ್ರತಿಯೊಂದು ಪದದ ಪ್ರಯೋಗವು ಹಿಂದಿನ-ಮುಂದಿನ ಪದಕ್ಕೆ ಪೂರಕವಾಗುವುದು ಗಮನಾರ್ಹ.

---

೧. ೫ನೆಯ ಸಂಧಿಯ ೩ನೆಯ ಪದ್ಯ, ಪುಟಸಂಖ್ಯೆ, ೯೧.

೨. ೫ನೆಯ ಸಂಧಿಯ ೯ನೆಯ ಪದ್ಯ, ಪುಟಸಂಖ್ಯೆ, ೯೩.

೧. ಕಾವನಾತನೆ ಕೋಲುವನಾತನೆ
ಸಾವೆನಾತನ ಕೈಯಬಾಯಲಿ
ನೀವು ಪಾಂಡವರೊಡನೆ ಸುಖದಲಿ ರಾಜ್ಯವಾಳುವುದು
**ಸಾವಿಗಾನಂಜಿದೆನೆ ಬದುಕುವ**
ನೀವು ಚಿಂತಿಸಲೇಕೆ ನಿಮ್ಮ
ಕಾವನೈ ಕರುಣದಲಿ ಗದುಗಿನ ವೀರನಾರಾಯಣ

ಸಾವವರು ನಾವಂಜಿ ಬದುಕೆವು ಎಂದು ಗ, ಟ, ಧ, ನ, ಪ ಪ್ರತಿಗಳಲ್ಲಿದೆ.

ಸಾವಡಂಜನು ತಾನು ಬದುಕುವ ಎಂದು 'ತ' ಪ್ರತಿಯಲ್ಲಿದೆ. ಹಿಂದಿನ - ಮುಂದಿನ ಸಾಲಿಗೆ **ಸಾವಿಗಾನಂಜಿದೆನೆ** ಬದುಕುವ ಎಂಬುದೇ ಸರಿಯಾಗಿ ಹೊಂದಿಕೊಳ್ಳುವುದು.

೨. ಎನೆ ಮುರಾಂತಕನಳುಕಿ ಯಮನಂ
ದನನ ಮತಿ ಸಂಧಾನದಲಿ ಸಂ
ಜನಿಸಿತಾದಡೆ ಕಾಣೆನವನಿಯ ಹೊಱಗೆ ಹಱುವುಗಳ
ಮನದೊಳನುಸಂಧಾನವಂತಕ
**ತನಯನಲಿ ತೊದಲಾಯ್ತು** ತೋಟೆಯ
ನೆನಹು ತಾನೆಂತೆನುತ ಚಿಂತಿಸುತಿರ್ದನಸುರಾರಿ।

**ತನುಜನಲಿ ತೊಳೆಸಾಯ್ತು** ಎಂದು ಗ, ಚ, ಟ, ದ ಪ್ರತಿಗಳಲ್ಲಿದೆ. ಆದರೆ ಸಂಪಾದಕರು ತನಯನಲಿ ತೊದಲಾಯ್ತು ಎಂಬುದನ್ನು ಆಯ್ಕೆಮಾಡಿದ್ದಾರೆ.

೩. ಎಲೆ ಮಹಾದೇವಾಯ್ತು ಹಾಲಾ
ಹಲ ಸುಧಾರಸವುಕ್ಕಿ ದುರಿಯ
ಗ್ಗಳವು ಸೀತಳವಾಯ್ತು ಸಿಡಿಲಾಟೋಪ ನಯವಾಯ್ತು
ಕೊಳುಗುಳಕೆ ಪವಮಾನನಂದನ
ನಳುಕಿದನು ಮಝು ಮಾಯೇ ಕುಂತೀ
ಲಲನೆ **ಹೆತ್ತಳು** ಸುತರನೆಂದನು ಶೌರಿ ನಸುನಗುತ।

---

೧. ೫ನೆಯ ಸಂಧಿಯ ೨೨ನೆಯ ಪದ್ಯ, ಪುಟಸಂಖ್ಯೆ, ೯೬.
೨. ೬ನೆಯ ಸಂಧಿಯ ೭ನೆಯ ಪದ್ಯ, ಪುಟಸಂಖ್ಯೆ, ೯೮.
೩. ೬ನೆಯ ಸಂಧಿಯ ೧೧ನೆಯ ಪದ್ಯ, ಪುಟಸಂಖ್ಯೆ, ೯೯.

ಪಡೆದಳೊ ಮಗನನೆಂದನು ದಾನವಧ್ವಸಿ ಎಂದು ಗ, ಟ, ದ, ನ, ಪ ಪ್ರತಿಗಳಲ್ಲಿದೆ. ಇದಕ್ಕೆ ಬದಲಾಗಿ ಹೆತ್ತಳು ಸುತರನೆಂದನು ಶೌರಿ ನಸುನಗುತ ಎಂಬುದನ್ನು ಸ್ವೀಕರಿಸಿದ್ದಾರೆ. ಕೆಲವು ಪಾಠಾಂತರಗಳನ್ನು ಗಮನಿಸಿದ್ದರೆ ಗ, ಟ, ದ, ಪ ಪ್ರತಿಗಳು ಒಂದೇ ರೀತಿ ಇರುವುದು ಕಂಡು ಬರುತ್ತದೆ.

೧. ಎಲೆಸಮೀರಕುಮಾರ ಸಂಪ್ರತಿ
ಗೆಳಸಿದೈ ಕಲಿತನವ ನೀರಲಿ
ಕಲಕಿದೈ ಕೈವಾರವಾದುದೆ ಕೌರವೇಂದ್ರನಲಿ
ಕಲಿಸಿದೈ ಕೃಷ್ಣಂಗೆ ನೀತಿಯ
ಬಳಸಿದೈ ಬಹುಮಾತವ ನರಕದೊ
ಳಿಳುಹಿದೈ ಶಶಿಕುಲವನೆಂದನಿಲಜನ ನೋಡಿದಳು

ಮನವ ಕುಲವನು ಕಲಕಿದೈ ಎಂದು ಝ ಪ್ರತಿಯಲ್ಲಿದೆ.

ಮಲವ ಕುಲದಲಿ ಕಲಸಿದೈ ಎಂದು ಠ, ಣ, ಬ ಪ್ರತಿಗಳಲ್ಲಿದೆ. ಈ ಸಾಲುಗಳನ್ನು ಗಮನಿಸಿದರೆ ತನವನೀರಲಕಲಕಿದೈ ಎಂಬುವುದೇ ಹೆಚ್ಚು ಸೂಕ್ತವೆನಿಸುತ್ತದೆ.

೨. ಬೇಡಲಟ್ಟುವನೇ ಮಹೀಪತಿ
ನಾಡೊಳೈ ದೂರುಗಳನವ ರಲಿ
ಮಾಡುವಾತನು ಕೃಷ್ಣನೇ ಸಂಧಾನವನು ನಿಮಗೆ
ಕೇಡುಗರು ಕೌರವನೃಪಾಲರ
ಕೂಡಿ ಬದುಕುವ ಭೀಮಸೇನನೆ
ರೂಢಿಸಿತಲಾ ನಿಮ್ಮ ಸಿರಿ ಸೋದರರ ಸೋರುವೆಗೆ

ಸಮ್ಮೇಳನ ಎಂದು ಖ, ಗ, ಚ, ಣ, ಪ ಪ್ರತಿಗಳಲ್ಲಿದೆ. ಇಲ್ಲಿ ಸಂಧಾನ ಎಂಬ ಪದಕ್ಕೂ ಸಮ್ಮೇಳನ ಎಂಬ ಪದಕ್ಕೂ ಇರುವ ವ್ಯತ್ಯಾಸವನ್ನು ಗಮನಿಸಿದರೆ ಸಮ್ಮೇಳನ ಎಂಬ ಪದಕ್ಕೆ ಬೇರೆ ರೀತಿಯಲ್ಲಿಯೇ ಅರ್ಥ ಬರುತ್ತದೆ. ಆದ್ದರಿಂದ ಸಂಧಾನವನು ಎಂಬುದು ಉತ್ತಮವೆನಿಸುತ್ತದೆ.

---

೧. ೭ನೆಯ ಸಂಧಿಯ ೧೯ನೆಯ ಪದ್ಯ, ಪುಟಸಂಖ್ಯೆ, ೧೦೧.

೨. ೭ನೆಯ ಸಂಧಿಯ ೨೦ನೆಯ ಪದ್ಯ, ಪುಟಸಂಖ್ಯೆ, ೧೦೨.

೧. ತನಯರೈವರು ವೀರಸಹದೇ
ವನು ಘಟೋತ್ಕಚನೀ ಸುಭದ್ರಾ
ತನಯನೆನ್ನಯ ತಂದೆ ಮೂಜಕ್ಕೋಹಿಣೀ ಸೇನೆ।
ಇನಿಬರೇ ಕಾದುವರು ದುಶ್ಯಾ
ಸನನ ಕರುಳನು ತೆಗೆದು ಕುರುಕುಲ
ವನವ ಸುಡುವರು ನಿಮ್ಮ ಹಾಗೇಕೆಂದಳಿಂದುಮುಖಿ

**ರಕುತವ ಸುರಿದು** ಎಂದು ಖ, ಝ, ಪ್ರತಿಗಳಲ್ಲಿದೆ.

**ರಕ್ತವ ಕುಡಿದು** ಎಂದು ಟ, ಠ, ದ ಪ್ರತಿಗಳಲ್ಲಿದೆ. ಇಲ್ಲಿ ಪ್ರಯೋಗವಾಗಿರುವ ಪದಗಳಿಂದ ಕೋಪ, ದ್ವೇಷ, ರೋಷ, ಛಲ, ಶೌರ್ಯ ಎಲ್ಲವೂ ವ್ಯಕ್ತವಾಗುತ್ತದೆ. ಆದರೆ **ಕರುಳು** ಎಂಬ ಪದ ದ್ವೇಷರೋಷಕ್ಕಿಂತ ಕ್ರೌರ್ಯವನ್ನು ವ್ಯಕ್ತಪಡಿಸುತ್ತದೆ ಹಾಗೂ ಕರುಳು ಎಂಬ ಪದ ಅದರ ಮುಂದಿನ ಪದಕ್ಕೆ ಪುಷ್ಟಿಕೊಡುತ್ತದೆ. **ಕರುಳನು ತೆಗೆದು ಕುರುಕುಲವನವ ಸುಡುವರು** ಎಂಬುದೇ ಔಚಿತ್ಯಪೂರ್ಣವಾಗಿದೆ.

೨. ಏಳು ತಾಯೆ ಸರೋಜಮುಖಿ ವಿಪಿ
ನಾಲಯದೊಳತಿನದೆದೆ ನಿನ್ನವ
ರಾಳಿಗೊಂಡಂದವನು ಬಲ್ಲೆನು ನಿನ್ನ ಹರಿಬದಲಿ।
ಕಾಳೆಗದವನೇ ಬಲಿದು ಬಹೆನಿವ
**ರೇಳಿಲವ ಮಾಡಿದರೆ** ರಿಪುಗಳ
ಸೀಳಿ ಕರುಳನು ಮುಡಿಸದಿಹೆನೇ ನಿನ್ನ ಕಬರಿಯಲಿ

**ನಿನ್ನೇಳಿಗೆಯ ದಿಟ ಮಾಡಿ** ಎಂದು ಕ, ಮ ಪ್ರತಿಗಳಲ್ಲಿದೆ.

**ನಿದ ಕೇಳಿ ನೀ ದಿಟ** ಮಾಡಿದರೆ ಎಂದು ಖ, ಬ ಪ್ರತಿಗಳಲ್ಲಿದೆ. ಆದರೆ ಸಂಪಾದಕರು ನಿವರೇಳಿಲವ ಮಾಡಿದರೆ ಎಂಬುದನ್ನು ಸ್ವೀಕರಿಸಿದ್ದಾರೆ.

---

೧. ೭ನೆಯ ಸಂಧಿಯ ೨೭ನೆಯ ಪದ್ಯ, ಪುಟಸಂಖ್ಯೆ, ೧೦೩.

೨. ೭ನೆಯ ಸಂಧಿಯ ೧೨ನೆಯ ಪದ್ಯ, ಪುಟಸಂಖ್ಯೆ, ೧೦೮.

೧. ದೇವಕಿಯ ವಸುದೇವನನು ಬಲ
ದೇವ ಸೌಭದ್ರಾದಿಯದು ಭೂ
ಪಾವಳಿಯ ಸುಕ್ಷೇಮಕುಶಲವ ಕುಂತಿ ಬೆಸಗೊಳಲು
ದೇವ ನಗೆಮೊಗದಿಂದ ವರವಸು
ದೇವ ದೇವಕಿಯಾದಿ ಯಾದವ
ರಾ ವಿಲಾಸಮಹೀಶರಿರವನು ಕುಂತಿಗಱುಹಿದನು

ನನಿರುದ್ಧಾರಿ ಎಂದು ಗ, ಡ, ಣ, ಪ, ನ ಪ್ರತಿಗಳಲ್ಲಿದೆ. ಸ್ವೀಕೃತಪಾಠ ಸೌಭದ್ರಾದಿ ಎಂದಿದೆ.

ಹೆಸರನ್ನು ಹೇಳುವಾಗ ನೇರವಾಗಿ ಹೇಳುವುದರಿಂದ ಸುಲಭವಾಗಿ ಅರ್ಥವಾಗುತ್ತದೆ ಎಂಬುದು ಸಂಪಾದಕರ ಆಶಯ.

೨. ನಾಳೆ ಬಹೇಳೆಂದು ವಿದುರನ
ಬೀಳುಕೊಟ್ಟನು ಬೇಹ ಭಟರಿಗೆ
ವೀಳಯವ ನೀಡಿದನು ಹರೆದುದು ನೃಪತಿಯಾಸ್ಥಾನ
ಜಾಳಿಸಿತು ತಮ ಮೂಡಣಾದ್ರಿಯ
ಮೇಲೆ [1]ತಲೆದೋಱುದನು ರವಿ[1] ಭೂ
ಪಾಲ ಕೌರವ[2]ನಂದಿನೊಡ್ಡೋ[2]ಲಗವ ರಚಿಸಿದನು

೧. ಕೆಂಪೆಸಯಿತ್ತು ಕುರು ಎಂದು ಕ, ಚ, ಮ ಪ್ರತಿಗಳಲ್ಲಿದೆ.

೨. ನೊಲವು ಮಿಗಲೋ ಎಂದು ಟ, ದ ಪ್ರತಿಗಳಲ್ಲಿದೆ.

ನುದಯದೊಡ್ಡೋ ಎಂದು ಡ, ನ, ಪ ಪ್ರತಿಗಳಲ್ಲಿದೆ.

ನಂದ ಮಿಗಲೋ ಎಂದು ಬ ಪ್ರತಿಯಲ್ಲಿದೆ.

ಆದರೆ ಸಂಪಾದಕರು ಇವುಗಳ ಬದಲಾಗಿ ೧. ತಲೆದೋಱುದನ ರವಿ ಹಾಗೂ ನಂದಿನೊಡ್ಡೋಲಗವ ಎಂದು ಸ್ವೀಕರಿಸಿದ್ದಾರೆ.

---

೧. ೮ನೆಯ ಸಂಧಿಯ ೧೯ನೆಯ ಪದ್ಯ, ಪುಟಸಂಖ್ಯೆ, ೧೧೭.

೨. ೮ನೆಯ ಸಂಧಿಯ ೨೮ನೆಯ ಪದ್ಯ, ಪುಟಸಂಖ್ಯೆ, ೧೨೦.

೧. ದೇವ ಬಂದನು ತನ್ನ ನೆನೆವರ
ಕಾವ ಬಂದನು ದೈತ್ಯಕುಲವನ
ದಾವ ಬಂದನು ಭಾಗವತಜನ ಲೋಲುಪನು ಬಂದ
ಭಾವಿಸುವೊಡಘಹಾರಿ ಬಂದನು
ವೋವಿ ಭಜಿಸಲು ತನ್ನ ಬೀಱುವ
**ದೇವ ಗದುಗಿನ ವೀರ ನರಯಣ ಬಂದನೋಲಗಕೆ**

**ಬಂದನು ವೀರನರಯಣ ನೃಪತಿಯರಮಿಗೆ** ಎಂದು 'ಮ' ಪ್ರತಿಯಲ್ಲಿದೆ. ಕುಮಾರವ್ಯಾಸ ಗದುಗಿನವನು ಎಂದು ಸಂಪಾದಕರು ಗದುಗಿನ ಎಂದಿರುವ ಪ್ರತಿಗಳನ್ನೇ ಆಯ್ಕೆ ಮಾಡಿಕೊಂಡಿರುವುದನ್ನು ಅಲ್ಲಲ್ಲಿ ಕಾಣಬಹುದು. ಪದ್ಯದ ಮೂಲಕ ಕುಮಾರವ್ಯಾಸನ ಸ್ಥಳವನ್ನು ಸೂಚಿಸುವ ದೃಷ್ಠಿಯಿಂದಲೇ ಅದಕ್ಕೆ ಒತ್ತುಕೊಟ್ಟಿರಬಹುದು ಹಾಗೂ ಪದ್ಯದ ಪಾಠಾಂತರಗಳಿಂದ ಕವಿಯ ವಿಚಾರವನ್ನು ಸ್ಪಷ್ಟಪಡಿಸುತ್ತಾರೆ ಎಂದರೆ ತಪ್ಪಾಗಲಾರದು.

೨. **ಕುಲದವನ** ಹೃದಯಾಂಧಕಾರವ
ಕಳಚಲೆಂದು ಹಿಮಾಂಶು ಹರಹಿದ
ನೆಳೆಯ ಬೆಳದಿಂಗಳನೆನಲು ಸುರರಿಪುಕುಲಾಂತಕನು
ತೊಳಪ ದಶನಮಯೂಖತಲೆ ಹೊಳೆ
ಹೊಳೆಯೆ ನುಡಿದನು ತತ್ಸಭಾಮಂ
ಡಲ ಮಹಾಂಭುದಿ ನುಡಿದೆರೆಯ ತನಿಗಡಣವಡಗಿರಲು

**ಖಳಮನದ** ಎಂದು 'ಖ' ಪ್ರತಿಯಲ್ಲಿದೆ.

**ಕುಲಮಲಿನ** ಎಂದು ದ, ಪ ಪ್ರತಿಯಲ್ಲಿದೆ.

**ಕುಲದವನ** ಎಂಬ ಪದ ಮುಂದಿನ ಪದವಾದ ಹೃದಯಾಂಧಕಾರವ ಎಂಬ ಪದಕ್ಕೆ ಹೆಚ್ಚು ಸೂಕ್ತವೆಂದು ತೋರುತ್ತದೆ.

---

೧. ೮ನೆಯ ಸಂಧಿಯ ೫೭ನೆಯ ಪದ್ಯ, ಪುಟಸಂಖ್ಯೆ, ೧೨೭.

೨. ೬ನೆಯ ಸಂಧಿಯ ೭೮ನೆಯ ಪದ್ಯ, ಪುಟಸಂಖ್ಯೆ, ೧೩೩.

೧. ಬೆರಳ ಮೀಸೆಯಲಿಡುತ ಕಿಱುನಗೆ
ವೆರಸಿ ಕರ್ಣಾದಿಗಳ ವದನವ
ತಿರುಗಿ ನೋಡುತ ಹರಿಯ ನುಡಿಗಳ ಕಿವುಡುಗೇಳುತ್ತ
ಮರುಳುತನದಾಳಾಪವೇತಕೆ
ಮುರಮಥನ ಪಾಂಡವರ ಕಥನವ
ನೊರೆಯದಿರು **ಕರ್ಣಕ್ಕೆ ಬಾಧೆಯಿದೆಂದನಾ ಭೂಪ**

**ಕರಣಕ್ಕೆ ಖಾತಿಯನೆಂದು ನೃಪ ನುಡಿದ** ಎಂದು ಕ, ಮ ಪ್ರತಿಗಳಲ್ಲಿದೆ.

**ಕರಣಕ್ಕೆ ಖಾತಿದೆಂದೆನಾ ಭೂಪ** ಎಂದು ಖ, ಚ, ಝ, ಬ ಪ್ರತಿಗಳಲ್ಲಿದೆ.

ಕರಣ ಎಂಬ ಪದ ಕರ್ಣ ಎಂಬ ಪದ ಎರಡು ಒಂದೇ ಆದರೂ ಕರ್ಣ ಎಂಬ ಪದ ಖಚಿತವಾಗಿ ವ್ಯಕ್ತಿಯನ್ನು ಸೂಚಿಸುತ್ತದೆ. ಕರಣ ಎಂಬ ಪದ ಬೇರೆ ಅರ್ಥ ಸೂಚಿಸುವುದರೊಂದಿಗೆ ಮುಂದಿನ ಭಾದೆ ಎಂಬ ಪದಕ್ಕೆ ಕರ್ಣ ಎಂಬ ಪದವೇ ಹೆಚ್ಚು ಉಚಿತವೆನಿಸುತ್ತದೆ.

೨. ಬಲದ ಭುಜದಲಿ ಪಾರ್ಥನೆಡದಲಿ
ಹಲಧರನು ಚರಣದಲಿ ಧರ್ಮಜ
ಕಲವೃಕೋದರ ನಕುಲ ಸಹದೇವಾದಿ ಯಾದವರು
ಲಲಿತಕಾಂತಿಯೊಳಖಿಳ ತಾರಾ
ವಳಿಗಳ ಮಳಗ್ರಹವಿರಲು ತೊಳ
ತೊಳಗಿ [1]**ಮೆಱೆದನು**[1] ವಿಶ್ವರೂಪ [2]**ವಿಹಾರಿ ಮುರವೈರಿ**[2]

೧. **ಬೆಳಗಿದ** ಎಂದು ಟ, ಯ, ರ ಪ್ರತಿಗಳಲ್ಲಿದೆ.

೨. **ವನಾಮಹಾಸಭೆಗೆ** ಎಂದು ಕ, ಮ ಪ್ರತಿಗಳಲ್ಲಿದೆ.

ಕೃಷ್ಣನು ವಿಶ್ವರೂಪವನ್ನು ತೋರಿದ ಬಗೆಯನ್ನು ಹೇಳುವಾಗ **ಮೆಱೆದನು, ವಿಹಾರಿ ಮುರವೈರಿ** ಎಂಬುದೇ ಹೆಚ್ಚು ಸೂಕ್ತವಾಗಿದೆ.

---

೧. ೯ನೆಯ ಸಂಧಿಯ ೧೪ನೆಯ ಪದ್ಯ, ಪುಟಸಂಖ್ಯೆ, ೧೩೭.

೨. ೯ನೆಯ ಸಂಧಿಯ ೬೨ನೆಯ ಪದ್ಯ, ಪುಟಸಂಖ್ಯೆ, ೧೪೯.

೧. ಬಂದು ವಿದುರನ ಮನೆಗ ದೇವಮು
ಕುಂದ ಕುಂತಿಯ ಕರೆದು ನಿನ್ನಯ
**ಕಂದರೈವರ ಮೇಲೆ** ಕೌರವನೃಪನ ಖತಿ ಬಿಲುಹು
ಇಂದು ಮುಖುದುದು ಸಂಧಿ ನಿನ್ನಯ
ಕಂದ ಕರ್ಣನ ಬೇಡಿಕೊಳು ನೀ
ನೆಂದು ಸೂಚಿಸಿ ಮರಳಿದನು ಮುರವೈರಿ ಹರುಷದಲಿ

**ನಂದನರ ಮೇಲಿಂದು** ಎಂದು 'ಗ' ಪ್ರತಿಯಲ್ಲಿದೆ.

**ನಂದನರುಗಳ ಮೇಲೆ** ಎಂದು ಟ, ಡ, ದ, ಪ, ರ ಪ್ರತಿಗಳಲ್ಲಿದೆ. ಇಲ್ಲಿ ನಂದನರು ಎಂಬಲ್ಲಿಗೆ **ಕಂದರೈವರ** ಎಂಬುದು ಎಷ್ಟು ವಿಧಿತವೆಂದರೆ ನಂದರು-ಮಕ್ಕಳು. ಎಂಬ ಅರ್ಥವನ್ನೇ ನೀಡಿದರು ತಾಯಿಗೆ ಮಕ್ಕಳು ಎಷ್ಟೇ ದೊಡ್ಡವರಾದರೂ ಕಂದಗಳೇ ಎಂಬುದು, ಐವರು ಎನ್ನುವ ಪದ ಕುಂತಿಗೆ ಕರ್ಣನು ಮಗನಾದರೂ ಆಕೆಗೆ ಐವರೆ ಮುಖ್ಯವಾದ್ದರಿಂದ **ಕಂದರೈವರು** ಎಂಬ ಪದ ಸಂಖ್ಯೆಯನ್ನು ಖಚಿತವಾಗಿ ತಿಳಿಸುವುದರೊಂದಿಗೆ ಅವಳ ಮನೋಭಾವನೆಯು ವ್ಯಕ್ತವಾಗುವುದರಿಂದ ಸಂಪಾದಕರು ಈ ಪದವನ್ನು ಆಯ್ಕೆ ಮಾಡಿರುವುದು ಗಮನಾರ್ಹವಾಗಿದೆ.

೨. ಲಲನೆ [೧]ತಾ ಪಡೆದೈದು[೧] ಮಂತ್ರಂ
ಗಳಲಿ ಮೊದ[೨]ಲಿಗ ನೀನು ನಿನ್ನಯ
ಬಳಿ[೨]ಯುಧಿಷ್ಠಿರದೇವ ಮಾಜಿನೆಯಾತ ಕಲಿಭೀಮ।
ಫಲುಗುಣನು ನಾಲ್ಕನೆಯಲ್ಲೈದನೆ
ಯಲಿ ನಕುಲಸಹದೇವರಾದರು
ಬಳಿಕ [೩]ಮಾದ್ರಿಯೊಳೊಂದು ಮಂತ್ರದೊಳಿಬ್ಬರುದಿಸಿದರು[೩]

೧. ಪಡೆದೀಯಯ್ದು ಎಂದು ಚ, ಬ ಪ್ರತಿಗಳಲ್ಲಿದೆ.

ಪಡೆದಿರ್ದೈದು ಎಂದು ಠ ಪ್ರತಿಯಲ್ಲಿದೆ.

೨. ಲಲನೀನು ಬಳಿಕಾ ಕಲಿ ಎಂದು ಕ, ಮ ಪ್ರತಿಗಳಲ್ಲಿದೆ.

೩. ಮಾದ್ರೀ ದೇವಿಯಿಂದವೆವೊಂದು ಮಂತ್ರದಲಿ ಎಂದು ಚ ಪ್ರತಿಯಲ್ಲಿದೆ.

---

೧. ೯ನೆಯ ಸಂಧಿಯ ೭೮ನೆಯ ಪದ್ಯ, ಪುಟಸಂಖ್ಯೆ, ೧೫೩.

೨. ೧೦ನೆಯ ಸಂಧಿಯ ೬ನೆಯ ಪದ್ಯ, ಪುಟಸಂಖ್ಯೆ, ೧೫೬.

ಪ್ರತಿ ಪದಗಳನ್ನು ಗಮನಿಸಿದರೆ ಸಂಪಾದಕರು ಪಾಠಾಂತರಿಸಿರುವುದು ಓದುಗನಿಗೆ ಸುಲಭವಾಗಿ ಅರ್ಥವಾಗಬೇಕು ಎಂಬುದು ಸ್ಪಷ್ಟವಾಗುತ್ತದೆ.

೧. ಮಕ್ಕಳೈವರೊಳಾನು ಹಿರಿಯನು
**ತಕ್ಕ ಮಾತೆಯ ಮಾತು** ಸಂದೇ
ಹಕ್ಕೆ ನೆಲೆಯಿಲ್ಲದು ನಿಲಲಿ ಧಾರುಣಿಯ ಬಯಸುವರೆ
ತಕ್ಕುದೇ ದಾತಾರನರಸಿಯೊ
ಳೊಕ್ಕತನವಿರಲಾರು ಮೆಚ್ಚುವ
ರಕ್ಕ ಹೇಳಾ ಹೇಸಳೇ ಜಯಲಕ್ಷ್ಮಿ ತನಗೆಂದ

**ಮಾತಂತಿರಲಿ** ಎಂದು ಖ ಪ್ರತಿಯಲ್ಲಿದೆ.

**ಮಾತಲೆ ತಾಯಿ** ಎಂದು ಗ, ಣ ಪ್ರತಿಗಳಲ್ಲಿದೆ.

**ತಿದು ಮಾತೆ** ಎಂದು ಟ ಪ್ರತಿಯಲ್ಲಿದೆ.

ಈ ಸಾಲುಗಳಲ್ಲಿ ಮಾತೆಯಮಾತು ಎಂಬುದೇ ಔಚಿತ್ಯಪೂರ್ಣವಾಗಿದೆ.

೨. ಆದಡೈವರು ಮಕ್ಕಳನು ತಲೆ
ಗಾದು [1]**ತೋಱ್ಯೆ ಕಂದ ನಿನಗೇ**
ನೀ[1]ದು ರಾಗ್ರಹವೊಪ್ಪುವುದೆ ಕೌರವನ[2]**ಸೇವೆಯಲಿ**[2]
ಹೋದ ಬಾಣವ ಮರಳಿ ತೊಡದಿರು
ಮಾದುಕಳೆ ವೈರವನೆನಲ್ಕೆ ಹ
ಸಾದವೆಂದನು ಬೀಳುಕೊಂಡನು ಬಂದನರಮನೆಗೆ

೧. **ಕೊಡುವುದು ಕಂದ ಕೇಳ್** ನಿನಗೀ ಎಂದು ಟ, ಬ ಪ್ರತಿಗಳಲ್ಲಿದೆ.

**ತೋಱ್ಯೆ** ಕಂದ ನಿನಗಿಂತೀ ಎಂದು ದ ಪ್ರತಿಗಳಲ್ಲಿದೆ.

೨. **ಕಟಕದಲಿ** ಎಂದು ಕ, ಮ ಪ್ರತಿಗಳಲ್ಲಿದೆ.

---

೧. ೧೦ನೆಯ ಸಂಧಿಯ ೩೪ನೆಯ ಪದ್ಯ, ಪುಟಸಂಖ್ಯೆ, ೧೬೩.

೨. ೧೦ನೆಯ ಸಂಧಿಯ ೩೬ನೆಯ ಪದ್ಯ, ಪುಟಸಂಖ್ಯೆ, ೧೬೪.

**ಸೀಮೆಯಲ್ಲಿ** ಎಂದು ಟ, ಡ, ದ, ನ ಪ್ರತಿಗಳಲ್ಲಿದೆ. ಆದರೆ **ತೋಜ್ಯೆ ಕಂದ** ನಿನಗೇನೀ ಮತ್ತು **ಸೇವೆಯಲಿ** ಎಂಬುದೇ ಸರಿಯೆನಿಸುತ್ತದೆ.

ರೂಢಿಸಿದ ಸುಮುಹೂರ್ತದಲಿ ಹೊಱ
ಬೀಡ ಬಿಟ್ಟರು [೧]ರಣಕೆ[೧] ಪಯಣವ
ಮಾಡಲೋಸುಗ ಸಾಱುದರು ನೃಪತಾಳಯಂಗಳಲಿ
ಕೂಡಿತಾಹವಸೈನ್ಯಸಾಗರ
ವೀಡಿಱುದು ನಡೆಗೊಂಡು[೨]ದಭ್ರದ
ರೂಢಿಗಳ[೨]ಜೋ[೩]ಡಿಗಳ ಜೋಕೆಯ[೩] ಘನ[೪]ರವಂಗಳಲಿ[೪]

೧. **ಧುರಕೆ** ಎಂದು ಕ, ಖ ಪ್ರತಿಗಳಲ್ಲಿದೆ.

೨. **ದಭ್ರದ ಜೋಡುಗಳ** ಎಂದು ಕ ಪ್ರತಿಯಲ್ಲಿದೆ.

**ದಾದಧಿಯನೋಡಿಸುವ** ಎಂದು ಚ ಪ್ರತಿಯಲ್ಲಿದೆ.

**ದಾದಧಿಯನೇಡಿಸುವ** ಎಂದು ಠ ಪ್ರತಿಯಲ್ಲಿದೆ

೩. **ಡಿಯ ತುರುಂಗದ** ಎಂದು ಕ ಪ್ರತಿಯಲ್ಲಿದೆ.

**ಕೆಯಲಿ ಬಂದುದು** ಎಂದು ಝ, ಟ, ಬ ಪ್ರತಿಗಳಲ್ಲಿದೆ.

೪. **ತರಂಗದಲಿ** ಎಂದು ಖ, ಝ, ಪ, ರ ಪ್ರತಿಗಳಲ್ಲಿದೆ.

ಹೀಗೆ ಪ್ರತಿ ಪದಗಳನ್ನು ಪರಿಶೀಲಿಸುತ್ತಾ ಹೋದರೆ, **ಧುರಕೆ** ಎಂಬ ಪದಕ್ಕೆ ಬದಲಾಗಿ **ರಣಕೆ** ಎಂಬ ಪದದ ಪಾಠಾಂತರ ಅತ್ಯಂತ ಉಚಿತ. ಏಕೆಂದರೆ ಓದುಗ ಅರ್ಥಕ್ಕಾಗಿ ಚಿಂತಿಸದೆ, ಹಿಂದಿನ ನಿಘಂಟುವನ್ನು ನೋಡದೆ, ಸುಲಭವಾಗಿ ಒಂದೇ ಓದಿಗೆ ಅರ್ಥವಾಗುವಂತೆ **ರಣಕೆ** ಎಂಬ ಪಾಠಾಂತರದ ಆಯ್ಕೆ ತುಂಬ ಸೂಕ್ತವಾದುದು.

ಎಸ್.ಎನ್. ಕೃಷ್ಣಜೋಯಿಸ್‌ರವರು ಉದ್ಯೋಗಪರ್ವವನ್ನು ಸಂಪಾದಿಸುವಾಗ ೧೮ ಹಸ್ತಪ್ರತಿಗಳನ್ನು ಪರಿಶೀಲಿಸಿದ್ದಾರೆ. ಪ್ರತಿ ಪುಟದಲ್ಲಿಯೂ ಹಸ್ತಪ್ರತಿಗಳಲ್ಲಿರುವ ಬದಲಾವಣೆಗಳನ್ನು ಪಾಠಾಂತರವನ್ನು ಪದ್ಯಗಳಿಗೆ ಅನುಗುಣವಾಗಿ ನೀಡಿದ್ದಾರೆ. ಕೊನೆಯಲ್ಲಿ ಹೆಚ್ಚಿನ ಪದ್ಯಗಳನ್ನು ಸಂಧಿಯ ಅನುಕ್ರಮದ ಮೂಲಕ ಉಲ್ಲೇಖಿಸಿದ್ದಾರೆ. ಅಂತ್ಯದಲ್ಲಿ

---

೧೧ನೆಯ ಸಂಧಿಯ ೩೬ನೆಯ ಪದ್ಯ, ಪುಟಸಂಖ್ಯೆ, ೧೭೪.

ಮಹಾಭಾರತ ನಿಘಂಟುವಿನಲ್ಲಿ ಪದ್ಯಗಳನ್ನು, ನಿಘಂಟುವಿನಲ್ಲಿ ಪದಗಳ ಅರ್ಥಗಳನ್ನು ಯಾವ ಓದುಗನಿಗೂ ಕೊರತೆ-ಗೊಂದಲವಾಗದಂತೆ ಅಚ್ಚುಕಟ್ಟಾಗಿ ನೀಡಿದ್ದಾರೆ. ಇವರ ಸಂಪಾದನಾ ಕಾರ್ಯ ಅಮೋಘವಾಗಿದ್ದು, ಉಳಿದ ಸಂಪಾದಕರಿಗೆ ಮಾದರಿಯಾಗಿದೆ. ಇವರ ನಂತರ ಉದ್ಯೋಗಪರ್ವವನ್ನು ಸಂಪಾದಿಸಿದವರಿಗೆ ಇವರ ಈ ಆವೃತ್ತಿ ಆಧಾರವಾಗಿರುವುದು ಗಮನಾರ್ಹವಾದ ಸಂಗತಿ.

* * * * *

## ಎಂ.ವಿ.ಸೀತಾರಾಮಯ್ಯನವರ ಕುಮಾರವ್ಯಾಸ ಭಾರತ ಸಂಗ್ರಹದ ಉದ್ಯೋಗಪರ್ವ

೧. **ಭಕುತಿಯಲಿ ಕಲಿಪಾರ್ಥನ** ಬುಜಾಂ
ಬಕನನೆಬ್ಬಿಸಲಮ್ಮದೊಯ್ಯನೆ ಚರಣ ಸೀಮೆಯಲಿ।
ಅಕುಟಿಲನು ಸಾರಿದನು ಬಳಿಕೀ
ವಿಕಳ ದುರ್ಯೋಧನನು ನಿಗಮ
ಪ್ರಕರ ಮೌಳಿಯ ಮೌಳಿಯತ್ತಲು ಸಾರ್ದು ಮಂಡಿಸಿದ

**ಚಕಿತಚಿತ್ತ ಶರೀರ** ಎಂದು ಪ್ರ, ಓ, ಕ, k, ಪ್ರತಿಗಳಲ್ಲಿದೆ. ಆದರೆ ಸಂಪಾದಕರು **ಭಕುತಿಯಲ್ಲಿ ಕಲಿಪಾರ್ಥ** ಎಂಬುದನ್ನು ಸ್ವೀಕರಿಸಿದ್ದಾರೆ.

೨. ಕೌರವೇಶ್ವರ ಕೇಳು ಧರಣೀ
ನಾರಿ **ಯಾರೊಡನೊಕ್ಕತನವಿ**
ದ್ದಾರ ಮೆಚ್ಚಿದಳಾರ ಸಂಗಡವುರಿಯ ಹಾಯಿದಳು।
ಭೂರಿ ಮಮಕಾರದಲಿ ನೃಪರು ವಿ
ಚಾರಿಸದೆ ಧರೆ ತಮ್ಮದಂದೇ
ನಾರಕದ ಸಾಮ್ರಾಜ್ಯ ಕೈದುವರೆಂದು ಹರಿ ನುಡಿದ

**ಯನಿಬರಿಗೊಕ್ಕತನ** ಎಂದು ಅ, ಕುಮಾ ಪ್ರತಿಗಳಲ್ಲಿದೆ. ಇಲ್ಲಿ **ಯಾರೊಡನೊಕ್ಕತನ** ಎಂಬುದನ್ನು ಓ, ಅ ಪ್ರತಿಗಳಿಂದ ಸ್ವೀಕರಿಸಿದ್ದಾರೆ.

೩. ನಾಡಿಗೋಸುಗ ಸೋದರರು ಹೊ
ಯ್ದಾಡಿ ಹಜಿಹಂಚಾದರೆಂಬುದ-
ನಾಡದಿಹುದೇ ಲೋಕ ಕಮಲಜನುಸುರಿಹನ್ನೆಬರ।
ಬೇಡ **ಖತಿ** ನಿಮ್ಮೊಳಗೆ ನೀವ್ ಕೈ-
ಗೂಡಿ ಬದುಕುವುದೊಳ್ಳಿತಾವ್ ನೆಜಿ
ನೋಡಿ ಸಂತಸಬುಡುವೆವೆಂದನು ರುಕ್ಮಿಣೀರಮಣ

---

ಎಂ. ವಿ. ಸೀತಾರಾಮಯ್ಯನವರ ಕುಮಾರವ್ಯಾಸಭಾರತ ಸಂಗ್ರಹದ ಉದ್ಯೋಗಪರ್ವದ
೧. ೯ನೆಯ ಪದ್ಯ, ಪುಟಸಂಖ್ಯೆ, ೩೦೪. ೨. ೧೩ನೆಯ ಪದ್ಯ, ಪುಟಸಂಖ್ಯೆ, ೩೦೫. ೩. ೧೪ನೆಯ ಪದ್ಯ, ಪುಟಸಂಖ್ಯೆ, ೩೦೫.

**ಕಟ** ಎಂದು ಆ ಮತ್ತು ಕುಮಾ ಪ್ರತಿಗಳಲ್ಲಿದೆ. ಇವರು ಓ, ಕ ಪ್ರತಿಗಳಲ್ಲಿರುವ **ಖತಿ** ಎಂಬುದಾಗಿ ಪಾಠಾಂತರಿಸಿದ್ದಾರೆ. ಇಲ್ಲಿ **ಕಟ** ಎಂಬ ಪದಕ್ಕಿಂತ **ಖತಿ** ಹೆಚ್ಚು ಸೂಕ್ತ. ಏಕೆಂದರೆ **ಖತಿ** ಎಂದರೆ **ಕೋಪ**ವಾದ್ದರಿಂದ ಮುಂದಿನ ಪದಕ್ಕೆ ಇದೇ ಹೆಚ್ಚು ಸೂಕ್ತವಾದುದು.

೧. ಎನಲು ನಗುತೆತ್ತಿದನು ಸಾರಥಿ
ತನವ ಕೈಕೊಂಡನು ಕೃಪಾಳು-
ನನುನಯವನಾನೆತ್ತ ಬಲ್ಲೆನು ಭೃತ್ಯವರ್ಗದಲಿ
ತನಗಹಂಕೃತಿಯಿಲ್ಲ ವೈರೋ-
ಚನಿಯ ಪಡಿಹಾಱಿಕೆ ಕಿರೀಟಯ
ಮನೆಯ ಬಂಡಿಯ **ಬೋವತನವಲೆ ನೃಪತಿ ಕೇಳೆಂದ**

**ಬೋವನಾದನು ವೀರನಾರಾಯಣ** ಎಂದು ಕುವೆಂಪು ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರ ಸಂಪಾದನ ಆವೃತ್ತಿಯಲ್ಲಿದೆ. ಇತರ ಪ್ರತಿಗಳನ್ನು ಗಮನಿಸಿರುವ ಸಂಪಾದಕರು **ಬೋವತನವಲೆ ನೃಪತಿ ಕೇಳೆಂದ** ಎಂಬುದನ್ನೇ ಸ್ವೀಕರಿಸಿದ್ದಾರೆ.

೨. ಇಳುಹಿದನು **ಹೊರೆ**ಯಲಿ ಮಹೀಪತಿ
ಕಳುಹಿದುಡುಗೊಱೆಗಳನು ಭೂಪತಿ-
ತಿಲಕ ಧರ್ಮಜನೊಪ್ಪುಗೊಂಡನು ನೃಪನ ಪಾವುಡವ।
ಒಲವು ಬೊಪ್ಪನಲುಂಟಲಾ ಮ-
ಕ್ಕಳನು ಮಱೆಯನು ಲೇಸು ಸಂಜಯ
ತಿಳುಹು ತಾತನ ಕುಶಲವನು ಗಾಂಧಾರಿ ದೇವಿಯರ

ಮಹಿ ಎಂದು ಆ, ಕುಮಾ ಪ್ರತಿಗಳಲ್ಲಿದೆ.

**ಹೊರೆ** ಎಂದರೆ ಸಮೀಪವಾದ್ದರಿಂದ '**ಇಳುಹಿದನು ಹೊರೆಯಲಿ ಮಹೀಪತಿ**' ಹಿಂದಿನ ಮುಂದಿನ ಪದಗಳಿಗೆ **ಹೊರೆ** ಎಂಬ ಪದದ ಪಾಠಾಂತರವೇ ಉಚಿತವಾಗಿದೆ.

---

೧. ೨೮ನೆಯ ಪದ್ಯ, ಪುಟಸಂಖ್ಯೆ, ೩೧೦.

೨. ೩೪ನೆಯ ಪದ್ಯ, ಪುಟಸಂಖ್ಯೆ, ೩೧೨.

೧. ನಕುಲ ನೀ ಹೇಳನುಮತವ ನಿ

ನ್ನಕುತಿ ಸಮರವೊ ಸಾಮವೋ ಮೇಣ್

ಸುಕರ ಮಂತ್ರವನರುಹು ನೀ ನಿನ್ನಂಜಬೇಡೆನಲು।

ಯುಕುತಿ ನಮಗಿನ್ನೇನುಭಯ ರಾ-

ಜಕವ ಸಂತೈಸುವುದು ಬೇರೆ-

ಮ್ಮುಕುತಿಯೆಲ್ಲಿಯೆದೆಂದನಾ ಮಾದ್ರೇಯನೊಲವಿನಲಿ

**ಹೇಳೈ** ಹದನ ನಿನ್ನಯ **ಯುಕುತಿ** ಎಂದು ಅ ಪ್ರತಿಯಲ್ಲಿದೆ.

**ನೀಹೇಳೆನುಹದ ನಿನ್ನುಕುತಿ** ಎಂದು ಪ್ರ ಪ್ರತಿಯಲ್ಲಿದೆ.

ಸಂಪಾದಕರು **ನೀ ಹೇಳನುಮತವನಿನ್ನುಕತಿ** ಎಂದು

ಪಾಠಾಂತರಿಸಿದ್ದಾರೆ. ಆ ಪ್ರತಿಯಲ್ಲಿ ಈ ಪದ್ಯವೇ ಇಲ್ಲ ಎಂಬುದನ್ನು ಸಂಪಾದಕರೇ ಸೂಚಿಸುತ್ತಾರೆ. ತಾವು ಪರಿಶೀಲಿಸಿರುವ ಎಲ್ಲಾ ಪ್ರತಿಗಳ ಬಗ್ಗೆ ಮಾಹಿತಿಯನ್ನು ನೀಡುತ್ತಾರೆ.

೨. ತನಯರೈವರು ವೀರ ಸಹದೇ-

ವನು ಘಟೋತ್ಕಚನೀ ಸುಭದ್ರಾ-

ತನಯನೆಮ್ಮೆಯ ತಂದೆ ಮೂಱಕ್ಷೋಹಿಣೀಸೇನೆ।

ಇನಿಬರೇ ಕಾದುವವರು ದುಶ್ಶಾ-

ಸನನ **ರಕುತವ ಸುಱಿದು** ಕುರುಕುಲ-

ವನವ ಸುಡುವರು ನಿಮ್ಮ ಹಂಗೇಕೆಂದಳಿಂದುಮುಖಿ

**ಕರುಳನು ತೆಗೆದು** ಎಂದು ಅ,ಕ ಪ್ರತಿಗಳಲ್ಲಿದೆ.

ಎಸ್.ಎನ್. ಕೃಷ್ಣಜೋಯಿಸರು **ಕರುಳನು ತೆಗೆದು** ಎಂಬ ಪದವನ್ನು ಆಯ್ಕೆ ಮಾಡಿಕೊಂಡರೆ, ಎಂ.ವಿ. ಸೀತಾರಾಮಯ್ಯನವರು **ರಕುತವ ಸುಱಿದು** ಎಂಬ ಪದವನ್ನು ಆಯ್ಕೆ ಮಾಡಿಕೊಂಡು ಪಾಠಾಂತರಿಸಿದ್ದಾರೆ. ಇಂತಹ ಕೆಲವು ಶಬ್ದ ಪಾಠಾಂತರಗಳ ನಿರ್ಧಾರದಿಂದ ಅವರ ಮನೋಧೋರಣೆಗಳನ್ನು ಗುರುತಿಸಬಹುದು.

---

೧. ೫೦ನೆಯ ಪದ್ಯ, ಪುಟಸಂಖ್ಯೆ, ೩೧೭.

೨. ೬೨ನೆಯ ಪದ್ಯ, ಪುಟಸಂಖ್ಯೆ, ೩೨೧.

೧. ಬರವ ಕಂಡಸುರಾರಿ ಮಂಚದೊ-
ಳಿರದೆ ದಿಮ್ಮನೆ ನಿಂದು ನರರಾ-
ಚರಣೆಗಳ ನಾಟಕವ ತಾನೇ ನಟಿಸಿ ತೋಱಿದನು।
ಹಿರಿಯರಿಗೆ ತಾ ಹಿರಿಯನೆಂಬೀ
ಗರುವತನವನು ಬಿಸುಟು ಕುಂತಿಗೆ
ಕರವ ಮುಗಿದೆಱಗಿದನು **ಮುನಿಜನನಿಕರ** ಉಘೆಯೆನಲು

**ಮುಗಿದನು ಸಕಲಸನಕಾದಿಗಳು ಘೇಯೆನಲು** ಎಂದು ಕ, ಓ, ಅ ಪ್ರತಿಗಳಲ್ಲಿದೆ. ಇಲ್ಲಿ **ಮುನಿಜನನಿಕರ** ಎಂಬುದೇ ಸೂಕ್ತವೆನಿಸುತ್ತದೆ.

೨. ಸೆಣಸು ಸೇರದ ದೇವನಿದಿರಲಿ
ಮಣಿಯದಾತನ ಕಾಣುತವೆ ಧಾ-
ರಿಣಿಯನೊತ್ತಿದನುಂಗುಟದ ತುದಿಯಿಂದ ನಸುನಗುತ।
ಮಣಿಖಚಿತಕಾಂಚನದ ಪೀಠದ
ಗೊಣಸು ಮುಱಿದುದು ಮೇಲೆ ಸುರಸಂ-
ದಣಿಗಳಾ ಯೆನೆ **ಹೊರಳಿ** ಬಿದ್ದನು ಹರಿಯ ಚರಣದಲಿ

**ಕವಿದು** ಎಂದು ಆ, ಕುಮಾ ಪ್ರತಿಗಳಲ್ಲಿದೆ.

**ಕೆಡೆದು** ಎಂದು ಕ, ಅ ಪ್ರತಿಗಳಲ್ಲಿದೆ. ಆದರೆ **ಹೊರಳಿ** ಎಂಬುದನ್ನು ಓ ಪ್ರತಿಯಿಂದ ಸ್ವೀಕರಿಸಲಾಗಿದೆ. ಮುಂದಿನ ಪದ ಬಿದ್ದನು ಹರಿಯ ಚರಣದಲಿ ಎಂಬುದಕ್ಕೆ **ಹೊರಳಿ ಬಿದ್ದನು** ಎಂಬುದೇ ಹೆಚ್ಚು ಸೂಕ್ತ. ಹಾಗೂ ಅರ್ಥದಿಂದಲೂ ಸರಿಯಿದೆ.

೩. **ಆಳು** ಹರಿದುದು ದೆಸೆದೆಸೆಗೆ ಭೂ-
ಪಾಲರಿಗೆ ರಾಯಸದ ಹದನನು
ಕೇಳಿದಾಗಲೆ ಕವಿದು ಬಂದರು ತಮ್ಮ ದಳ ಸಹಿತ।
ಸೂಳವಿಸಿದವು ಸನ್ನೆಯಲಿ ನಿ-
ಸ್ಸಾಳವಂದಿನ ಮಱುದಿವಸ ವೈ-
ಹಾಳಿಯನು ಹೊಱವಂಟರನಿಬರು ದೈತ್ಯರಿಪುಸಹಿತ

---

೧. ೮೯ನೆಯ ಪದ್ಯ, ಪುಟಸಂಖ್ಯೆ, ೩೩೦. ೨. ೧೦೭ನೆಯ ಪದ್ಯ, ಪುಟಸಂಖ್ಯೆ, ೩೩೬. ೩. ೧೯೧ನೆಯ ಪದ್ಯ, ಪುಟಸಂಖ್ಯೆ, ೩೬೪.

**ಚೂಳಿ** ಎಂದು ಆ ಪ್ರತಿಯಲ್ಲಿದೆ.

**ಜೋಳಿ** ಎಂದು ಓ, ಕ, k, ಕುಮಾ, ಅ ಪ್ರತಿಗಳಲ್ಲಿದೆ.

**ಸ್ವೀಕೃತಪಾಠ ಕಾ ಪ್ರತಿಯಿಂದ, ಆಳು** ಎಂಬುದನ್ನು ಸ್ವೀಕರಿಸಿದ್ದಾರೆ.

**ಆಳು** ಎಂದರೆ - ಯೋಧರು, ಭಟರು ಎಂಬರ್ಥವಿದೆ. ಹಾಗಾಗಿ ಆಳು ಎಂಬ ಪದ ಈ ಸಾಲಿಗೆ ಸರಿಹೊಂದುತ್ತದೆ.

ಎಸ್. ಎನ್. ಕೃಷ್ಣಜೋಯಿಸ್‌ರವರು ಉದ್ಯೋಗಪರ್ವದ ಸಂಪಾದನೆಗೆ ೧೮ ಹಸ್ತ ಪ್ರತಿಗಳನ್ನು ಪರಿಶೀಲಿಸಿದ್ದಾರೆ. ಹಾಗೂ ಹೆಚ್ಚಿನ ಪದ್ಯಗಳನ್ನು, ನಿಘಂಟುವನ್ನು ಅಂತಿಮದಲ್ಲಿ ಸೂಚಿಸಿದ್ದಾರೆ. ಇವರಲ್ಲಿ ೭೦೦ ಪದ್ಯಗಳಿವೆ. ಆದರೆ ಎಂ.ವಿ. ಸೀತಾರಮಾಯ್ಯನವರು ಕೇವಲ ೩-೪ ಹಸ್ತಪ್ರತಿಗಳನ್ನು ಮಾತ್ರ ಪರಿಶೀಲಿಸಿ ಸಂಪಾದಿಸಿದ್ದಾರೆ. ಹೆಚ್ಚಿನ ಪದ್ಯ, ಪದಗಳ ಅರ್ಥವನ್ನು ಪ್ರತಿ ಪುಟದಲ್ಲಿಯೂ ಅಡಿ ಟಿಪ್ಪಣಿಯಲ್ಲಿ ನೀಡುತ್ತಾರೆ. ಇವರ ಉದ್ಯೋಗ ಪರ್ವದಲ್ಲಿ ೧೯೩ ಪದ್ಯಗಳಿವೆ. ಇಬ್ಬರ ಸಂಪಾದನಾ ಕಾರ್ಯದ ಮಾದರಿಗಳನ್ನು ಗುರುತಿಸಬಹುದೇ ವಿನಾಃಹೋಲಿಸಬಾರದು. ಏಕೆಂದರೆ ಎಂ.ವಿ. ಸೀತಾರಾಮಯ್ಯನವರು ಸಂಪೂರ್ಣ ಕುಮಾರವ್ಯಾಸ ಭಾರತಕ್ಕೆ ಒತ್ತುಕೊಟ್ಟಿದ್ದಾರೆ. ಎಂ.ಎನ್. ಕೃಷ್ಣಜೋಯಿಸ್‌ರವರು ಉದ್ಯೋಗಪರ್ವವನ್ನು ಮಾತ್ರ ಕೇಂದ್ರವಾಗಿಟ್ಟುಕೊಂಡು ಸಂಪಾದಿಸಿದ್ದಾರೆ.

* * * * *

# ಸಮಾರೋಪ

ನನ್ನ ಸಂಪ್ರಬಂಧದಲ್ಲಿ ಉದ್ಯೋಗಪರ್ವಗಳ ಸಂಪಾದನೆಯ ಸ್ಥೂಲವಾದ ಸಮೀಕ್ಷೆಯನ್ನು ಮಾಡಲಾಗಿದೆ. ಕುಮಾರವ್ಯಾಸ ಮಹಾಭಾರತದ ಹತ್ತುಪರ್ವಗಳನ್ನು ಅನೇಕ ವಿದ್ವಾಂಸರು ಸಂಪೂರ್ಣವಾಗಿ, ಬಿಡಿ-ಬಿಡಿಯಾಗಿ ಸಂಪಾದಿಸಿದ್ದಾರೆ ಹಾಗೂ ಕೆಲವು ವಿದ್ವಾಂಸರು ಹೊಸಗನ್ನಡ ಗದ್ಯಾನುವಾದವನ್ನು ಮಾಡಿದ್ದಾರೆ. '**ಭಾರತೇಸಾರ ಉದ್ಯೋಗಃ**' ಎಂಬ ಸೂಕ್ತಿಯಂತೆ. ಸಾರವತ್ತಾದ ಉದ್ಯೋಗಪರ್ವದ ಸಂಪಾದನಾ ಕಾರ್ಯವನ್ನು ಗಮನಿಸಿದರೆ ತೀರ ವಿರಳವಾಗಿರುವುದು ಗಮನಾರ್ಹ.

ಕ್ರಿ.ಶ.೧೮೬೫ರಿಂದ ಇಲ್ಲಿಯವರೆಗೆ ನಡೆದಿರುವ ಉದ್ಯೋಗಪರ್ವದ ಸಂಪಾದನೆಗಳ ಬಗ್ಗೆ ಹೇಳುವುದಾದರೆ ಶಾಸ್ತ್ರೀಯವಾಗಿ ಉದ್ಯೋಗಪರ್ವ ಒಂದನ್ನೇ ಕೇಂದ್ರವಾಗಿಸಿಕೊಂಡು ವಿಶ್ಲೇಷಣೆ ಮಾಡಿರುವ ಬರಹಗಳು ಇದುವರೆಗೆ ಬೆರಳೆಣಿಕೆಯಷ್ಟು ಮಾತ್ರ.

ಇದುವರೆಗೆ ಕನ್ನಡದಲ್ಲಿ ಪ್ರಕಟವಾಗಿರುವ ಉದ್ಯೋಗಪರ್ವದ ಸಂಪಾದನೆಯ ವಿವಿಧ ಪರಿಷ್ಕರಣೆಗಳನ್ನು ಸಮೀಕ್ಷಿಸಿದರೆ, ಹೆಚ್ಚು ಶಾಸ್ತ್ರೀಯವಾಗಿ ಸಂಪಾದನೆಗೊಂಡಿರುವ ಆವೃತ್ತಿಯೆಂದರೆ '**ಎಸ್.ಎನ್. ಕೃಷ್ಣಜೋಯಿಸ್ ಅವರ ಉದ್ಯೋಗಪರ್ವ**'. '**ಎಂ.ವಿ. ಸೀತಾರಾಮಯ್ಯನವರು ಕುಮಾರವ್ಯಾಸಭಾರತ ಸಂಗ್ರಹ**'ವನ್ನು ಹಲವಾರು ಪಾಠಾಂತರಗಳೊಂದಿಗೆ ಸಂಪಾದಿಸಿದ್ದಾರೆ.

ಇನ್ನೂ ಮುಂದೆಯಾದರೂ ಕುಮಾರವ್ಯಾಸ ಭಾರತ ಹಾಗೂ ಇತರ ಕವಿಗಳ ಭಾರತದ ತೌಲನಿಕ ಅಧ್ಯಯನ ನಡೆಯಬೇಕು. ಮುಖ್ಯವಾಗಿ ಪಂಪಭಾರತ - ಕುಮಾರವ್ಯಾಸಭಾರತದ ಪ್ರತಿಯೊಂದು ಪರ್ವಗಳನ್ನು ತೌಲನಿಕ ಅಧ್ಯಯನ ಮಾಡಬಹುದು. ಆದರೆ ಇಂದಿನ ಯಾವ ವಿದ್ವಾಂಸರು ಅದರ ಬಗ್ಗೆ ಒಲವನ್ನು ತೋರಿಸದೆ ಇರುವುದು ಸ್ಪಷ್ಟವಾಗುತ್ತದೆ. ಮುಂದಿನ ದಿನಗಳಲ್ಲಿಯಾದರೂ ಈ ಕಾರ್ಯ ನಡೆದರೆ ಸಾಹಿತ್ಯದ ವಿದ್ಯಾರ್ಥಿಗಳಿಗೆ ಅನುಕೂಲವಾಗುತ್ತದೆ.

* * * * *

# ೧ - ಅನುಬಂಧ

## ಸಂಪೂರ್ಣ ಮಹಾಭಾರತದಲ್ಲಿ ಬರುವ ಉದ್ಯೋಗಪರ್ವದ ಭಾಗಗಳ ವಿವರ

- ಪಂಪ ಭಾರತದಲ್ಲಿ ಉದ್ಯೋಗಪರ್ವದ ಭಾಗ : ೯ನೆಯ ಆಶ್ವಾಸದ ೧೮ನೆಯ ಪದ್ಯದಿಂದ ೧೩ನೆಯ ಆಶ್ವಾಸದ ವರೆಗೂ ಒಳಗೊಂಡಿರುವ ಭಾಗ.
- ಎಲ್. ಗುಂಡಪ್ಪನವರ ಕುಮಾರವ್ಯಾಸ ಮಹಾಕವಿಯ 'ಕರ್ಣಾಟಕ ಭಾರತದಕಥಾಮಂಜರಿ'ಯ ಗದ್ಯಾನುವಾದದ ಉದ್ಯೋಗಪರ್ವದ ಭಾಗಃ 'ಸಾರಥಿಯಾದನರ್ಜುನಗೆ ಮುರವೈರಿ'ಯಿಂದ 'ಪಾಂಡವರು ಕರ್ಣನೊಳುವೆಂಠಣಿಸಿದರು'ವರೆಗಿನ ಭಾಗ.
- ಶ್ರೀ ಎನ್ಕೆ ಕುಲಕರ್ಣಿಯವರ ಕುಮಾರವ್ಯಾಸ ಭಾರತ ಗದುಗಿನ ಭಾರತದ ಗದ್ಯಾನುವಾದದ ಉದ್ಯೋಗಪರ್ವದ ಭಾಗ : ೨೦೨ನೇ ಪುಟದಿಂದ ೨೨೨ನೇ ಪುಟದವರೆಗೆ.
- ದೇವುಡು ನರಸಿಂಹಶಾಸ್ತ್ರಿಯವರ 'ಮಹಾಭಾರತ ಸಂಗ್ರಹ' ಹೊಸಗನ್ನಡ ಗದ್ಯಾನುವಾದದ ಉದ್ಯೋಗಪರ್ವದ ಭಾಗ : ಸೇನಾಸಂಗ್ರಹದಿಂದ ಅಂಬೋಪಾಖ್ಯಾನದವರೆಗಿನ ಭಾಗ.

* * * * *

# ೨ - ಗ್ರಂಥಸೂಚಿ

* **ಪಂಪಭಾರತಂ ಎಂಬ ವಿಕ್ರಮಾರ್ಜುನ ವಿಜಯಂ**

(ಸಂ) ಬೆಳ್ಳಾವೆ ವೆಂಕಟನಾರಾಯಣಪ್ಪ

೧೯೩೧

ಕರ್ಣಾಟಕ ಸಾಹಿತ್ಯ ಪರಿಷತ್ ಬೆಂಗಳೂರು

* **ಕನ್ನಡ ಮಹಾಭಾರತ ಉದ್ಯೋಗಪರ್ವ ಸಂಗ್ರಹ**

(ಸಂ) ಟಿ.ಎಸ್. ಶಾಮರಾವ್

ಎಚ್.ಎಂ. ಶಂಕರನಾರಾಯಣರಾವ್

೧೯೪೬

ಕಾವ್ಯಾಲಯ ಪ್ರಕಾಶನ.

* **ಉದ್ಯೋಗಪರ್ವ**

(ಸಂ) ಎಸ್.ಎನ್. ಕೃಷ್ಣಜೋಯಿಸ್

೧೯೫೫

ಓರಿಯಂಟಲ್ ರೀಸರ್ಚ್ ಇನ್‌ಸ್ಟಿಟ್ಯೂಟ್ ಪಬ್ಲಿಕೇಷನ್ಸ್, ಮೈಸೂರು.

* **ಮಹಾಭಾರತದ ಸಂಗ್ರಹ**

ದೇವುಡು

೧೯೫೮

ಶ್ರೀಗಿರ್ವಾಣ ವಿದ್ಯಾಪೀಠ

ಬೆಂಗಳೂರು.

* **ಕುಮಾರವ್ಯಾಸ ಮಹಾಕವಿಯ ಕರ್ಣಾಟ ಭಾರತ ಕಥಾಮಂಜರಿ**

(ಸಂ) ಕುವೆಂಪು ಮತ್ತು ಮಾಸ್ತಿ ವೆಂಕಟೇಶ ಅಯ್ಯಂಗಾರ್

೧೯೫೮

ಪ್ರಸಾರಂಗ

ಮೈಸೂರು.

* **ಕನ್ನಡ ಗ್ರಂಥ ಸಂಪಾದನೆ**

ಡಿ.ಎಲ್. ನರಸಿಂಹಾಚಾರ್

೧೯೬೪,

ಶಾರದಾಮಂದಿರ, ಮೈಸೂರು.

* **ಕನ್ನಡ ಮಹಾಭಾರತ ಉದ್ಯೋಗಪರ್ವ ಸಂಗ್ರಹ**

(ಸಂ) ತ.ಸು. ಶಾಮರಾಯ

೧೯೬೮

ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ, ಮೈಸೂರು.

* **ಕುಮಾರವ್ಯಾಸ ಸರಸವಾಣಿ**

ಡಿ.ವಿ. ಶೇಷಗಿರಿರಾವ್

೧೯೭೦

ಜಯನಗರ ಬೆಂಗಳೂರು.

* **ಕುಮಾರವ್ಯಾಸ ಭಾರತ (ಗದುಗಿನ ಭಾರತದ ಗದ್ಯಾನುವಾದ)**

ಎನ್ಕೆ

೧೯೭೧

ಸಮಾಜ ಪುಸ್ತಕಾಲಯ ಧಾರವಾಡ.

* **ಕುಮಾರ್ಯವಾಸ ಭಾರತ (ಕಾವ್ಯಸಂಗ್ರಹ)**

ತ.ಸು.ಶಾಮರಾಯ

೧೯೭೨,

ಸಾಹಿತ್ಯ ಅಕಾಡೆಮಿ, ಸಮಾಜ ಪುಸ್ತಕಾಲಯ, ಧಾರವಾಡ.

* **ಕುಮಾರವ್ಯಾಸ ಮಹಾಕವಿಯ ಕರ್ಣಾಟಕ ಭಾರತದ ಕಥಾಮಂಜರಿ (ಗದ್ಯಾನುವಾದ)**

ಎಲ್.ಗುಂಡಪ್ಪ

೧೯೭೬

ಹೇಮಂತ ಸಾಹಿತ್ಯ, ಬೆಂಗಳೂರು.

* ಪಂಪಕವಿ ವಿರಚಿತ ಪಂಪ ಭಾರತಂ ವಿಕ್ರಮಾರ್ಜುನ ವಿಜಯ (ಗದ್ಯಾನುವಾದ)

ಎನ್. ಅನಂತರಂಗಾಚಾರ್

೧೯೭೭

ಕನ್ನಡ ಸಾಹಿತ್ಯ ಪರಿಷತ್ತು , ಬೆಂಗಳೂರು.

* ಕುಮಾರವ್ಯಾಸ ಭಾರತ ಸಂಗ್ರಹ

(ಸಂ) ಎಂ.ವಿ. ಸೀತಾರಾಮಯ್ಯ

೧೯೯೦

ಬಿ.ಎಂ. ಶ್ರೀ ಪ್ರತಿಷ್ಠಾನ ಬೆಂಗಳೂರು.

* ಗ್ರಂಥ ಸಂಪಾದನೆ ಕೆಲವು ಅಧ್ಯಯನ

ವೈ.ಸಿ. ಭಾನುಮತಿ

೧೯೯೭

ಕೇಶವ ಪ್ರಕಾಶನ, ಮೈಸೂರು.

* ಕನ್ನಡ ಸಾಹಿತ್ಯ ಚರಿತ್ರೆ

ತ.ಸು.ಶಾಮರಾಯ

೧೯೯೭

ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ, ಮೈಸೂರು.

* ಕುಮಾರವ್ಯಾಸ ಭಾರತ ಒಂದು ಅಧ್ಯಯನ

ಸೀತಾರಾಮ ಜಾಗೀರ್‌ದಾರ್

೧೯೯೮

ಶ್ರೀ ವೆಂಕಟೇಶ್ವರ ಪ್ರಕಾಶನ, ಬೆಂಗಳೂರು.

* ಶಾಸ್ತ್ರೀಯ

ಡಾ|| ಟಿ.ವಿ. ವೆಂಕಟಾಚಲಶಾಸ್ತ್ರಿ

೧೯೯೯

ಸಪ್ನ ಬುಕ್ ಹೌಸ್, ಬೆಂಗಳೂರು.

